# ಗೀತಾಚಾರ್ಯನ ಪರಬ್ರಹ್ಮೋಪದೇಶ

ಮತ್ತು

# ಅರ್ಜುನನ ವಿಮರ್ಶೆ

*Examined by Asthan Pandits*
*and Graciously Approved by*
SRI-SRI JAGADGURU SAKSHAT PARABRAHMA
CHANDRASEKHARA BHARATI
SRINGERI MUTT, SRINGERI
*as a book serviceable to lovers of knowledge the contents being in accordance with Sastras*



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೧

# ಗೀತಾಚಾರ್ಯನ ಪರಬ್ರಹ್ಮೋಪದೇಶ

ಮತ್ತು

# ಅರ್ಜುನನ ವಿಮರ್ಶೆ



ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮರ್ಜುನ
ಮಯ್ಯರ್ಪಿತ ಮನೋಬುದ್ಧಿಃ ಮಾಮೇವೈಷ್ಯಸ್ಯ ಸಂಶಯಃ
ಇತಿಗುಹ್ಯತಮಂಶಾಸ್ತ್ರಂ ಇದಮುಕ್ತಂ ಮಯಾನಘ
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥

ಬೆಲೆ: ರೂ. ೨-೮-೦

ಓಂ ಪರಬ್ರಹ್ಮಣೇನಮಃ

**ಅಜ್ಞಾನವು**

ಜ್ಞಾನ ಆನಂದಗಳನ್ನು ಅಪಹರಣಮಾಡಿರುವ
ಮನುಷ್ಯನ ದುರತ್ಯಯ ಶತ್ರು — ಸರ್ವ ದುಃಖಗಳ ಕಾರಣ.

**ಪರಬ್ರಹ್ಮನು**

ಅಮೃತಸ್ವರೂಪನು ಮತ್ತು ಅಜ್ಞಾನಕ್ಕೆ ಮೃತ್ಯುವು.

**ಮನುಷ್ಯನ**

ಸರ್ವದುಃಖ ಹಾನಿ — ಅಮೃತಸುಖ ಪ್ರಾಪ್ತಿಗೆ
ಪರಬ್ರಹ್ಮದರ್ಶನ — ಪರಬ್ರಹ್ಮಪ್ರವೇಶ
ಒಂದೇ ಮಾರ್ಗ.

**ವೇದಶಾಸ್ತ್ರಗಳು ಅಜ್ಞಾನವನ್ನು**

ಜಗಜ್ಜನನಿ—ಪರಬ್ರಹ್ಮಸ್ವರೂಪಿಣಿ ಎಂದು ಸಾರುತ್ತಿವೆ.





ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೧

# ಜಗದ್ಗುರು ಸಾಕ್ಷಾತ್ ಪರಬ್ರಹ್ಮ ಚಂದ್ರಶೇಖರ ಭಾರತಿ ಸ್ವಾಮಿಗಳು



**ಆದಿತ್ಯ—** ಪ್ರಿಯ-ಅಪ್ರಿಯ ರೂಪದ ಜಗತ್ತನ್ನು ಸ್ಪಷ್ಟವಾಗಿ ಪ್ರಕಾಶಿಸುವವನು.

**ಜಗದ್ಗುರು—** ಪ್ರಿಯ-ಅಪ್ರಿಯ ಜಗತ್ತಿನ ಮಿಥ್ಯಾಸ್ವರೂಪವನ್ನೂ ಮತ್ತು ಮಿಥ್ಯಾ ದೃಶ್ಯದ ಜಗತ್ತಿಗೆ ಪರಂ ಆದ ಅಮೃತಸುಖಸ್ಥಾನವನ್ನೂ ಸ್ಪಷ್ಟವಾಗಿ ಪ್ರಕಾಶಿಸುವನು. ಜ್ಯೋತಿಷಾಮಪಿ ತಜ್ಜ್ಯೋತಿ. ಅಜ್ಞಾನ ಸಂಮೋಹಗಳ ಸಂಹಾರ ಕರ್ತ. ಅಮೃತಸ್ವರೂಪ. ಜ್ಞೇಯಬ್ರಹ್ಮ. ಜ್ಞಾನದೀಪ.

**ಉಪದೇಶ—**

ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮರ್ಜುನ (ಅಮೃತ+ಜ್ಯೋತಿ)
ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ(ಮಹಾಕಾಶಘಟಾಕಾಶ)
ಮಯ್ಯರ್ಪಿತ ಮನೋಬುದ್ಧಿ ಮಾಮೇವ ಐಷ್ಯಸಿ ಅಸಂಶಯಃ(ಪರಬ್ರಹ್ಮಚಿಂತನ)
ಮನ್ಮನಾಭವಮದ್ಭಕ್ತೋ ಮದ್ಯಾಜೀಮಾಂ ನಮಸ್ಕುರು
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿಮೇ (ಪರಬ್ರಹ್ಮಪ್ರವೇಶ)
ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು (ವಿಮರ್ಶೆಯ ಪ್ರಾಮುಖ್ಯ)

**ಭಕ್ತ—**(ಸಂವಾದ ವಿಮರ್ಶೆಯ ಅನಂತರ ಹೇಳುವ ಉತ್ತರ)

ನಷ್ಟೋ ಮೋಹಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ (ಉಪದೇಶ ಅನುಷ್ಠಾನ)

## GRACIOUS APPROVAL OF HIS HOLINESS

## SRI-SRI
## JAGADGURU SAKSHAT PARABRAHMA
## CHANDRASEKHARA BHARATI

SRINGERI MUTT, SRINGERI

(Communicated through the Officer-in-charge of Sringeri Mutt, Sringeri, in letter dated 23rd November 1951)

Dear Sir,

Your proof copy of "Parabrahma-upadesha" by Gitacharya, was submitted to His Holiness. His Holiness had no time to go through it. It was got examined by the Asthan Pandits. His Holiness has directed me to inform you that the contents of your book are in accordance with Sastras, that your attempt to render the book into Kannada is a service to lovers of knowledge and that your attempt is praiseworthy.

The book is herewith returned, the receipt of which please acknowledge.

Yours faithfully,

(Sd.) G. GURUMURTY SASTRY.

# FOREWORD

Every man in the world, whose *jiva* is heavily afflicted by the worldly sorrows and who has been robbed of his *divine jnana and bliss*, need not helplessly weep over his position and get dejected in despair. The cause of his affliction is the "*veil of Agnana*"—an eternal foe in the garb of a friend and mother—co-existing with the *jiva* from time immemorial dogging him from birth to birth and co-existing also in deep sleep, dream and waking conditions. Due to this long inseperable association, *jiva* in his ignorance has actually *become* ' *one with this Agnana* ' without knowing her as his enemy who has actually robbed and involved him in the worldly afflictions. This *Agnana* is not to be understood as something negative in nature like non-knowledge, but is to be understood as a positive material which makes up the mind-budhi-senses-body and also the external world. This *Agnana* is also known as *prakruti* or *Maya* in vedic literature and is described as all pervading and all powerful.

The Para-Brahma *upadesha* by Gitacharya, and *vimarsha* by Arjuna relate in detail, the hidden secrets of this formidable enemy in close quarters, and the continuous and intense efforts needed by the *jiva* to dis-associate himself from her, and the continuous and intense efforts needed to associate with the Omniscient Omnipotent Omnipresent Para-Bramha who is an embodiment of '*gnana cum bliss*' and who is also a *Mrutyu* who will annihilate the *Agnana* just as the fire with flame burns away the wood to destruction.

" *The one-ness of the jiva with Agnana* " will get destroyed permanently when *jiva* succeeds to give up his association with her and succeeds to become "one with the Secondless Para-Bramha", just as one-ness of sky with earthen pot gets destroyed when it gives up its association with the pot, and instead gets associated with the undivided secondless sky. "The *jiva*" thus released

from the fetters of the *Agnana* becomes verily "the Secondless Para-Brahma", an embodiment of bliss with no more fear of afflictions or enslavement by *Agnana*, just as the pot-sky released from the pot will automatically become the undivided secondless sky with no more envelopement by the earthen pot.

It is to be noted that even when the pot-sky appeared as divided and enveloped by the pots of various sizes and denominations, it was never actually divided and enveloped; but remained always as an undivided secondless sky. So also *jiva*, even when he appeared as enslaved and afflicted by *Agnana* in the form of mind-budhi-senses-body, etc., in deep sleep, dream and waking conditions, never suffered actually any enslavement or affliction but always remained as secondless Para-Brahman. But what had happened really during the period of his association with *Agnana* was, that his own inherent *gnana* had been robbed of by her and his own inherent bliss remained unrealised and everything he saw with the veil was unreal and topsy turvy. When this "*veil of Agnana*" is destroyed, *the gnana cum bliss* inherent in *jiva* which had been hidden for ages shines forth with great splendour "as the Secondless Para-Bramha", as stated by Gitacharya in the verse:

*Gnanena tu tadagnanam yesham nashita Atmanaha* |
*Teshamadityavatu gnanam prakashayati* "*Tatparam*" ||

The man with such vision with veil of *Agnana* burnt away is called "*Tatvadarshi*" and to him the world will have no real existence and will have lost all power of causing fear or affording pleasure or pain. He realises Para-Bramha as *Aham Para-Bramha Asmi–Aham Amrutam Asmi.*

He is known in the world as "Light of Lights and Jagadguru."

SAKSHAT PARA-BRAMHA SHANKARACHARYA.

# ಮುನ್ನುಡಿ

## ಶ್ರದ್ಧಾಭಕ್ತಿಗಳು ಅಜ್ಞಾನ ನಾಶಕ ಸಾಮರ್ಥ್ಯವುಳ್ಳ ಜ್ಞಾನ ವಿಜ್ಞಾನಗಳನ್ನು ಪಡೆಯಲು ಹೇಳಲ್ಪಟ್ಟಿರುವ ಸಾಧನಗಳು

**ಅಜ್ಞಾನ**—(ಜ್ಞಾನ+ಆನಂದ ಅಪಹಾರಕದ ಆವರಣ)

ಅಜ್ಞಾನೇನಾವೃತಂ [ಜ್ಞಾನಂ] ತೇನ ಮುಹ್ಯಂತಿ ಜಂತವಃ

**ಈಶ್ವರ ಜೀವವಿಭಕ್ತಿ** (ವಿಭಕ್ತಮಿವಚಸ್ಥಿತಂ)—

ಅವಿಭಕ್ತಂ ಚ "ಭೂತೇಷು ವಿಭಕ್ತಮಿವಚಸ್ಥಿತಂ" (ಕಲ್ಮಷ)
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ (ಕಶ್ಮಲ)

**ಜ್ಞಾನಾಗ್ನಿ**—(ಜ್ಞಾನ ದೀಪ)

[ಜ್ಞಾನೇನ ತು] ಅಜ್ಞಾನಂ ಯೇಷಾಂ ನಾಶಿತಮಾತ್ಮನಃ

**ಪರಮಫಲ**—

ತೇಷಾಂ ಆದಿತ್ಯವಜ್ಜ್ಞಾನಂ ಪ್ರಕಾಶಯತಿ "ತತ್ಪರಂ" ॥

**ಪರಬ್ರಹ್ಮ ಅವಿಭಕ್ತ** (ಜ್ಞೇಯ–ಜ್ಯೋತಿಸ್ಸ್ವರೂಪ–ಅತೀತ–ಅಮೃತರೂಪ)—

"ಜ್ಞೇಯಂ" ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಅಮೃತಮಶ್ನುತೇ
ಅನಾದಿಮತ್ಪರಂಬ್ರಹ್ಮನ್ನಸತ್ತನ್ನಾಸದುಚ್ಯತೇ ॥ (ನೇತಿ ನೇತಿ)
"ಜ್ಯೋತಿಷಾಮಪಿ ತಜ್ಜ್ಯೋತಿ [ತಮಸಃ] ಪರಮುಚ್ಯತೇ ॥"(ಪರಂಜ್ಯೋತಿ)

**ಸಗುಣಬ್ರಹ್ಮ ಅವಿಭಕ್ತ** (ಸರ್ವರೂಪನಂತೆ ಕಾಣುವ ಸರ್ವಾತೀತ)—

ಸರ್ವತಃ ಪಾಣಿಪಾದಂ 'ತತ್' ಸರ್ವತೋಕ್ಷಿ ಶಿರೋಮುಖಂ (ಕ್ಷೇತ್ರಜ್ಞ-ಕ್ಷೇತ್ರಿ)
ಸರ್ವತಃ ಶೃತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ (ಮಹಾಕಾಶವತ್)

### ಅಜ್ಞಾನದ ಶತ್ರು ಸ್ವರೂಪ

೧. ಅಜ್ಞಾನವು ಅವಿಭಕ್ತವಾದ ಏಕವಾದ ಪರಬ್ರಹ್ಮನಾದ 'ಜ್ಞೇಯ' ವಸ್ತುವನ್ನು ದ್ರಷ್ಟೃವಿಗೆ ಕಾಣದಂತೆ ಆವರಣಮಾಡಿ, "ಜೀವ ಈಶ್ವರ"ರಿಂದ ಕೂಡಿದ ಅನೇಕ ವಿಧವಾದ ವರ್ಣ, ಆಕೃತಿಗಳಿಂದ ಕೂಡಿದ ಸಚರಾಚರ ಜಗತ್ತಿನಂತೆ ಕಾಣುವ ಹಾಗೆ ಮಾಡಿರುವುದರಿಂದ 'ಜಗಜ್ಜನನಿ' ಎಂಬ ಹೆಸರನ್ನು ಪಡೆದಿದೆ. ಸರ್ವ ಚರಾಚರ ಭೂತ

ಗಳನ್ನು 'ಜ್ಞೇಯ' ವಸ್ತುವು ಅಂತಃ ಬಹಿಃ ವ್ಯಾಪಿಸಿದ್ದರೂ, ಪರಂಜ್ಯೋತಿಯಾಗಿ ಪ್ರಕಾಶಿಸುತ್ತಿದ್ದರೂ ಅಜ್ಞಾನ ಆವೃತನಾದ ದ್ರಷ್ಟೃವಿಗೆ ಕಾಣಬರದಂತೆ ಮಾಡಿ ದೂರಸ್ಥನನ್ನಾಗಿರುವಂತೆ ಮಾಡಿದೆ. 'ಜ್ಞೇಯ' ವಸ್ತುವು ಅವಿಭಕ್ತವಾದ ಏಕವಸ್ತುವಾಗಿ ತಮಸ್ಸಿಗೆ ಪರಂ ಆಗಿ ಪ್ರಕಾಶಿಸುತ್ತಿದ್ದರೂ, ಅಹಂ-ತ್ವಾಂ ವಿಭಕ್ತಿಗಳಿಂದ ಕೂಡಿ ವ್ಯಷ್ಟಿರೂಪದ ಅನೇಕ ಜೀವರಂತೆಯೂ ಮತ್ತು ಸಮಷ್ಟಿರೂಪದಿಂದ ಸರ್ವಗತನಾದ ಸೃಷ್ಟಿಸ್ಥಿತಿ ಸಂಹಾರಕರ್ತನಾದ ಈಶ್ವರನಂತೆಯೂ ತೋರುವಂತೆಮಾಡಿದೆ. ಸಕಲ ಕರ್ಮಗಳೂ 'ಜ್ಞೇಯ' ವಸ್ತುವನ್ನು ಆವರಿಸಿರುವ ಅಜ್ಞಾನದಿಂದಲೇ ಮಾಡಲ್ಪಡುತ್ತಿದ್ದರೂ, ಜೀವನು ಸ್ವಭಾವತಃ ಪರಬ್ರಹ್ಮ ಲಕ್ಷಣದಿಂದ ಇರುವ ಅಧ್ಯಾತ್ಮನಾಗಿ ಅಕರ್ತನಾದರೂ ಕರ್ಮಲೇಪವಿಲ್ಲದವನಾದರೂ, ಪ್ರಕೃತಿಸ್ಥ ಪುರುಷನನ್ನಾಗಿ (ಅಜ್ಞಾನಕ್ಕೆ ಪ್ರಕೃತಿ ಎಂದೂ, ಮಾಯೆ ಎಂದೂ ಹೆಸರು) ತಿಳಿಯುವಂತೆ ವಿಪರೀತ ದರ್ಶನವನ್ನುಂಟುಮಾಡಿರುವದರಿಂದ, ಪ್ರಕೃತಿ ಗುಂಪಿಗೆ ಸೇರಿದ ವಿಭಕ್ತಿಗಳಾದ ಮನ ಬುದ್ಧಿ ಅಹಂಕಾರಗಳನ್ನು, ಪ್ರಕೃತಿಸ್ಥನಾದ ಜೀವನು ತನ್ನಲ್ಲಿ ಆರೋಪಿಸಿಕೊಂಡು, ನಾನು, ನನ್ನದು ಎಂದೂ, ಮತ್ತು ಪ್ರಕೃತಿ ಗುಂಪಿಗೆ ಸೇರಿದ ವಿಭಕ್ತಿಗಳಾದ ಪಂಚಭೂತಗಳಿಂದ ಉಂಟಾದ ಇಂದ್ರಿಯಗಳನ್ನೂ ಪಂಚೀಕೃತವಾದ ದೇಹವನ್ನೂ ತನ್ನಲ್ಲಿ ಆರೋಪಿಸಿಕೊಂಡು ದೇಹವನ್ನೇ ನಾನು ನನ್ನದು ಎಂದೂ ತಿಳಿದು, ಅಹಂ ಕರ್ತಾ ಎಂದು ಅಹಂಕಾರ ವಿಮೂಢಾತ್ಮನಾಗಿ ಕರ್ಮವನ್ನು ಮಾಡುತ್ತಾ, ಅಹಂ ಭೋಕ್ತಾ ಎಂದು ತಿಳಿದು ವಿಷಯ ಭೋಗಗಳ ಭೋಕ್ತೃವಾಗಿ ದೇಹಾಂತರವನ್ನೂ ಲೋಕಾಂತರವನ್ನೂ ಹೊಂದುತ್ತಾ, ರಾಗಭಯ ಕ್ರೋಧಗಳಿಂದ ಕೂಡಿ ಧಾವಂತಪಡುತ್ತಾ 'ಜೀವ'ನೆಂಬ ಹೆಸರಿನಿಂದ ಲೋಕದಲ್ಲೂ ವೇದದಲ್ಲೂ ಪ್ರಸಿದ್ಧನಾಗಿರುತ್ತಾನೆ.

### ಜ್ಞಾನಾಗ್ನಿ ಸಾಧನ – ಕರ್ಮನಿಷ್ಠೆ – ಅಸಂಗಶಸ್ತ್ರ

೨. ಈ ರೀತಿಯಾಗಿ ಗೀತಾಚಾರ್ಯನಿಂದ ಹೇಳಲ್ಪಟ್ಟಿರುವ ಮತ್ತು ಸರ್ವರ ಅನುಭವದಲ್ಲೂ ಇರುವ ಬಂಧನಸ್ವರೂಪದ ಅಜ್ಞಾನವನ್ನು ಜ್ಞಾನದ ಅಭಾವ ಎಂದು ಹೇಳಬಾರದು. ಜ್ಞೇಯನಾದ ಪರಬ್ರಹ್ಮ

ನನ್ನು ಆವರಣಮಾಡಿ, ಚರಾಚರ ಜಗತ್ತಿಗೆ ಕಾರಣವಾಗಿ ಜಗಜ್ಜನನಿ ಎಂದು ಹೆಸರು ಪಡೆದು ಪ್ರಕೃತಿಸ್ಥನಾದ ಜೀವನ ತತ್ವತಃ ಜ್ಞಾನ ವನ್ನು ಅಪಹರಣಮಾಡಿ ವಿಪರೀತ ದರ್ಶನವನ್ನುಂಟುಮಾಡಿರುವ ಶತ್ರು ಎಂದೇ ತಿಳಿಯಬೇಕು. ಈ ಅಜ್ಞಾನವನ್ನು ಗೀತಾಚಾರ್ಯನು "ಸ್ವಾಂ ಪ್ರಕೃತಿ, ದೈವೀ ಹ್ಯೇಷಾ ಗುಣಮಯೀಮಮ ಮಾಯಾ ದುರತ್ಯಯಾ – ಅಸತ್ತು ಅಲ್ಲದ ಭಾವವಸ್ತು" ಎಂದು ಹೇಳಿದ್ದಾನೆ. ಈ ರೀತಿ ಇರುವ ದುರತ್ಯಯವಾದ ಅಜ್ಞಾನವನ್ನು ನಾಶಮಾಡುವುಥಲಿಕ್ಕೆ ವೇದಗಳೂ ಗೀತೆಯೂ ಜ್ಞಾನಾಗ್ನಿ ವಿಜ್ಞಾನಾಗ್ನಿಗಳನ್ನು ಸಾಧನವನ್ನಾಗಿ ಹೇಳುತ್ತಿವೆ. ಜೀವನಿಗೆ ಇರುವ ಅಹಂ ದೇಹ ಎಂಬ ವಿಮೂಢಭಾವದ ವಿಪರೀತ ದರ್ಶನ ವನ್ನು ಮತ್ತು ವಿಷಯ ಭೋಗಗಳ ಕಾಮ ಸಂಕಲ್ಪಗಳನ್ನು ಭಸ್ಮಮಾಡಲು ಕರ್ಮಯೋಗವನ್ನೂ, ಅಹಂ ದೇಹಿ, ಅಹಂ ಕರ್ತಾ, ಅಹಂ ಭೋಕ್ತಾ ಎಂಬ ಸಂಮೋಹ ದರ್ಶನವನ್ನು ಭಸ್ಮಮಾಡಿ ಸಮಗ್ರವಾಗಿ ಪ್ರವಿಲೀಯ ಮಾಡಲು ಸರ್ವಕರ್ಮ ಸನ್ಯಾಸ ಯೋಗವನ್ನೂ ಸಾಧನವನ್ನಾಗಿ ಹೇಳಿರು ತ್ತವೆ. ಕರ್ಮಯೋಗ, ಕರ್ಮಸಂನ್ಯಾಸ ಯೋಗಗಳಿಗೆ 'ಜ್ಞಾನಾಗ್ನಿ ಸಾಧನ'ಗಳೆಂದು ಹೆಸರು. ಈ ಜ್ಞಾನಾಗ್ನಿಯನ್ನು ಗೀತಾಚಾರ್ಯನು "ನಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೆ । ತತ್ಸ್ವಯಂ ಯೋಗ ಸಂಸಿದ್ಧಃ ಕಾಲೇನ ಆತ್ಮನಿವಿಂದತಿ ॥" ಎಂದು ಹೇಳಿರುತ್ತಾನೆ.

### ಮನುಷ್ಯ ದೇಹದ ವಾಸುದೇವನೇ ಸಾಕ್ಷಾತ್ಪರಬ್ರಹ್ಮನು

೩. ರಾಜ್ಯ ಲಾಭಕ್ಕಾಗಿ ಯುದ್ಧ ಸನ್ನದ್ಧನಾಗಿದ್ದ ಅರ್ಜುನನು, ಧಾರ್ತರಾಷ್ಟ್ರರ ಸಹಾಯಕ್ಕಾಗಿ ಭೀಷ್ಮದ್ರೋಣರೇ ಬಂದು ಯುದ್ಧಕ್ಕೆ ನಿಂತಿರುವುದನ್ನು ಕಂಡು ವಿಮೂಢಭಾವದಿಂದ ಉಂಟಾದ ಶೋಕ-ಮೋಹ-ಭಯಗಳನ್ನು ಪ್ರದರ್ಶಿಸಿ ಶೋಕ ಸಂವಿಗ್ನಮಾನಸನಾಗಿರಲು, ಗೀತಾಚಾರ್ಯನಾದ ವಾಸುದೇವನು ಅರ್ಜುನನ ವಿಮೂಢ ಭಾವಕ್ಕೆ (ಸಂಮೋಹ) ಕಾರಣವಾದ ಅಜ್ಞಾನವನ್ನೂ, ಅಜ್ಞಾನ ಕಾರ್ಯವಾದ ವಿಮೂಢ ಭಾವದಿಂದ ಉಂಟಾದ ಶೋಕ-ಮೋಹ-ಭಯಗಳನ್ನೂ ಸಮಗ್ರ ವಾಗಿ ಭಸ್ಮಮಾಡುವ ಸಾಮರ್ಥ್ಯವುಳ್ಳ (ಜ್ಞಾನ ದೀಪ) ವಿಜ್ಞಾನಾಗ್ನಿ ಯನ್ನು ಪಡೆಯಲು, "ಜ್ಞೇಯನೆಂದು ಹೇಳಲ್ಪಟ್ಟಿರುವ ಪರಬ್ರಹ್ಮನು,"

ಮನುಷ್ಯ ದೇಹದಿಂದ ಸಂವಾದವನ್ನು ಮಾಡುತ್ತಿರುವ ವಾಸುದೇವನಾದ ತಾನೇ ಎಂದು ತನ್ನ ಪರಂಜ್ಯೋತಿ ಸ್ವರೂಪವನ್ನೂ ಮತ್ತು ತನ್ನ ಅಮೃತ ಸ್ವರೂಪವನ್ನೂ ವಿಶದವಾಗಿ ತಿಳಿಸಿ, "ಪರಬ್ರಹ್ಮನಾದ ತನ್ನ ಚಿಂತನವನ್ನೇ" ಸಾಧನವನ್ನಾಗಿ ಉಪದೇಶ ಮಾಡಿರುವುದರಿಂದ, ಈ ಗ್ರಂಥವು **ಗೀತಾಚಾರ್ಯನ ಪರಬ್ರಹ್ಮೋಪದೇಶವೆಂದೂ** ಮತ್ತು ಗೀತಾಚಾರ್ಯನ ಅನೇಕ ರಹಸ್ಯ ಉಪದೇಶಗಳು ಈ ಗ್ರಂಥದಲ್ಲಿ ವಿಮರ್ಶಿಸಲ್ಪಟ್ಟಿರುವುದರಿಂದ **ಅರ್ಜುನನ ವಿಮರ್ಶೆ** ಎಂದೂ ಕರೆಯಲ್ಪಟ್ಟಿದೆ. (ಪರಬ್ರಹ್ಮ ವಾಸುದೇವನ ಚಿಂತನ = ಜ್ಞಾನನಿಷ್ಠೆ)

## ವಾಸುದೇವನ ಚಿಂತನದ ಅಂತ್ಯಫಲ ವಿಜ್ಞಾನಾಗ್ನಿ (ಜ್ಞಾನದೀಪ) ಪರಮಫಲ ಅಮೃತಸುಖ ಅನುಭವ

೪. ಅಜ್ಞಾನವನ್ನು ಭಸ್ಮಮಾಡಲು ಸಾಮರ್ಥ್ಯವುಳ್ಳ ಜ್ಞಾನಾಗ್ನಿಯನ್ನು ಪಡೆಯಲು ಅನುಷ್ಠಾನಕ್ಕಾಗಿ ಹೇಳಿರುವ ಗೀತಾಚಾರ್ಯನ ಉಪದೇಶ ವಾಕ್ಯಗಳು ಈ ರೀತಿ ಇರುತ್ತವೆ. ಸಾಕ್ಷಾತ್ ಪರಂಬ್ರಹ್ಮ-ಅಮೃತಸ್ವರೂಪ ಪರಂಜ್ಯೋತಿ ಸ್ವರೂಪದ ವಾಸುದೇವನ (ಉಪಾಸನ) ಚಿಂತನ:—ಜ್ಞಾನನಿಷ್ಠೆ – ಜ್ಞಾನ ಅಸಿ.

**ಸಾಕ್ಷಾತ್ ಪರಂಬ್ರಹ್ಮ ವಾಸುದೇವ :—**

ತಸ್ಮಾತ್ ಸರ್ವೇಷು ಕಾಲೇಷು ಮಾಂ ಅನುಸ್ಮರ ಯುದ್ಧ್ಯ ಚ
ಮಯ್ಯರ್ಪಿತ ಮನೋಬುದ್ಧಿಃ ಮಾಮೇ ವೈಷ್ಯಸ್ಯ ಸಂಶಯಃ
ಮಯ್ಯರ್ಪಿತ ಮನೋಬುದ್ಧಿಃ ಯೋ ಮದ್ಭಕ್ತಃ ಸಮೇಪ್ರಿಯಃ
ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ (ಜ್ಞೇಯಬ್ರಹ್ಮ ಚಿಂತನ)
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ (ಜ್ಞೇಯಬ್ರಹ್ಮ ಪ್ರವೇಶ)
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮರ್ಜುನ ॥ (ಅಪರೋಕ್ಷದರ್ಶನ)

ಈ ರೀತಿ ಹೇಳಲ್ಪಟ್ಟಿರುವ ವಾಸುದೇವನ ಉಪದೇಶ ವಾಕ್ಯಗಳನ್ನು ಅನಾದಿ-ಅಜ್ಞಾನವನ್ನು ಭಸ್ಮಮಾಡುವ ಸಾಮರ್ಥ್ಯದ ವಾಕ್ಯಗಳೆಂದು ವಿಶ್ವಾಸಯುತ ಮನಬುದ್ಧಿಗಳಿಂದ ಗ್ರಹಿಸುವುದೇ 'ಶ್ರದ್ಧಾ' ಎಂದೂ, ಅನಂತರ ವಿಚಾರ ವಿಮರ್ಶೆ ಪೂರ್ವಕ ಅನುಷ್ಠಾನಪರನಾಗಿ ಸಾಕ್ಷಾತ್ತಾಗಿ ಎದುರಿಗೆ ಸಾರಥಿಯಾಗಿ ಕುಳಿತು ಮಾತನಾಡುತ್ತಿರುವ ಮನುಷ್ಯ ರೂಪ

ದಿಂದ ಕಾಣುವ ವಾಸುದೇವನೇ ಸಾಕ್ಷಾತ್ತಾದ, ಏಕನಾದ, ಅಮೃತ ಸ್ವರೂಪದ ಪರಂಜ್ಯೋತಿ–ಪರಬ್ರಹ್ಮನೆಂದು ತಿಳಿದು ಮನ-ಬುದ್ಧಿಗಳನ್ನು ಉಚ್ಚಾರಣ ಪೂರ್ವಕವಾಗಿಯೂ, ಅನುಸ್ಮರಣಾ ಪೂರ್ವಕವಾಗಿಯೂ, ವಿಚಾರ ವಿಮರ್ಶೆಪೂರ್ವಕವಾದ ಪರಿಚಿಂತನಗಳಿಂದ ಅರ್ಪಿಸುವದೇ 'ಭಕ್ತಿ' ಎಂದೂ, 'ಪ್ರೀತಿ' ಎಂದೂ, ಈ ರೀತಿಯ ಶ್ರದ್ಧಾಭಕ್ತಿಗಳಿಗೆ ಸಿಗುವ 'ಅಂತ್ಯಫಲ', ಜೀವನ ಜ್ಞಾನವನ್ನು ಅಪಹರಣಮಾಡಿ ವಿಪರೀತ ದರ್ಶನವನ್ನುಂಟುಮಾಡಿ ಜ್ಞೇಯನಾದ ಪರಬ್ರಹ್ಮನ ಅಮೃತಸುಖಾನು ಭವಕ್ಕೆ ಅನಾದಿಕಾಲದಿಂದ ಪ್ರತಿಬಂಧಕವಾಗಿರುವ ಅಜ್ಞಾನವನ್ನು ಭಸ್ಮಮಾಡಲು ಸಾಮರ್ಥ್ಯವುಳ್ಳ 'ವಿಜ್ಞಾನಾಗ್ನಿ'ಯೇ ಎಂದೂ ನಿಶ್ಚಯಿಸಿ ತಿಳಿದು, ಅಜ್ಞಾನಾವೃತನಾದ ಜೀವನು ಸಾಧನಗಳನ್ನು ಅನುಷ್ಠಾನ ಮಾಡಬೇಕು. ಗೀತಾಚಾರ್ಯನು 'ಭಕ್ತಿ' ಶಬ್ದಕ್ಕೆ ಅರ್ಥವನ್ನು ಮನುಷ್ಯರೂಪದ ವಿಭಕ್ತನಾದ ವಾಸುದೇವನನ್ನೇ ಅವಿಭಕ್ತ ಜ್ಯೋತಿ ಸ್ವರೂಪ ಪರಬ್ರಹ್ಮನೆಂದು ತಿಳಿದು ಅವಿಭಕ್ತಜ್ಯೋತಿಸ್ವರೂಪ ಪರಬ್ರಹ್ಮ ನಲ್ಲಿ ಮನಬುದ್ಧಿಗಳನ್ನು 'ಅರ್ಪಣ' ಮಾಡುವುದು ಎಂದು ಹೇಳಿರು ತ್ತಾನೆ. ಅಜ್ಞಾನಸ್ಥನಾದ ಜೀವನು, ಮನೋಬುದ್ಧಿಗಳನ್ನೂ ಮನುಷ್ಯ ದೇಹದ ವಿಭಕ್ತನಾದ ಜೀವನನ್ನೂ ಅವಿಭಕ್ತ ಜ್ಯೋತಿಸ್ವರೂಪ ಪರಬ್ರಹ್ಮನೆಂದು ತಿಳಿದು ಅವಿಭಕ್ತ ಜ್ಯೋತಿಸ್ವರೂಪ ಪರಬ್ರಹ್ಮನಲ್ಲಿ ಈಗ ಅರ್ಪಣಮಾಡುತ್ತಿಲ್ಲ. ಜಂತುವಿನಂತೆ ಮನೋಬುದ್ಧಿಗಳನ್ನು ಇಂದ್ರಿಯಗಳಿಗೂ, ದೇಹಕ್ಕೂ, ಇಂದ್ರಿಯಾರ್ಥಗಳಾದ ವಿಷಯ ಭೋಗಗಳಿಗೂ, ವಿಷಯಭೋಗಗಳನ್ನು ಕೊಡುವ ಅನ್ಯದೇವತೆಗಳಿಗೂ ಅಜ್ಞಾನ ಆವೃತನಾಗಿ ಅರ್ಪಣೆಮಾಡುತ್ತಿದ್ದಾನೆ. ಅಸಂಗಶಸ್ತ್ರದಿಂದ ವಿಷಯಭೋಗಗಳ ಭೋಕ್ತೃತ್ವವನ್ನು ಪರಿತ್ಯಾಗಮಾಡಿ, ಬುದ್ಧಿ-ಮನ ಗಳನ್ನು, ಇಂದ್ರಿಯಗಳಿಗೂ, ಇಂದ್ರಿಯಾರ್ಥಗಳಿಗೂ ಇಂದ್ರಿಯಾರ್ಥ ಗಳನ್ನು ಕೊಡುವ ಅಜ್ಞಾನಾವೃತರಾದ ಅನ್ಯದೇವತೆಗಳಿಗೂ ಸಂಮೋಹ ದಿಂದ ಅರ್ಪಣೆಮಾಡದಂತೆ ಎಚ್ಚರಿಕೆಯಿಂದ ಇರಬೇಕು. 'ಅಸಂಗಶಸ್ತ್ರ' ಒಂದು ಇದ್ದರೆ ಸಾಲದು. ಇದರ ಜೊತೆಗೆ 'ಜ್ಞಾನ ಅಸಿಯಿಂದ' ಛೇದನವೂ ಅವಶ್ಯಕ. ಜೀವನು ತನ್ನ ಅಧ್ಯಾತ್ಮಸ್ವರೂಪವನ್ನು, ಜ್ಯೋತಿ

ಸ್ವರೂಪವನ್ನು, ಮತ್ತು ಪರಬ್ರಹ್ಮ ಸ್ವರೂಪವನ್ನು ತಿಳಿಯದೆ, ಅಹಂಕಾರವನ್ನೇ ತಾನು ಎಂದು ತಿಳಿದು, ಅಹಂ ಕರ್ತಾ ಅಹಂ ಭೋಕ್ತಾ ಅಹಂ ದೇಹಿ ಎಂದು ವಿಮೂಢಭಾವದಿಂದ ಮನ-ಬುದ್ಧಿಗಳೊಡನೆ ಅನನ್ಯತ್ವವನ್ನೂ ಏಕತ್ವವನ್ನೂ ಕಲ್ಪಿಸಿಕೊಂಡಿರುತ್ತಾನೆ. ಆದ್ದರಿಂದ ವಿಚಾರ ವಿಮರ್ಶೆಗಳಿಂದ ಜೀವನು ಅಹಂಕಾರ ಬುದ್ಧಿ-ಮನಗಳಿಂದ ತಾನು "ಪರಂ; ಅಧ್ಯಾತ್ಮ; ಜ್ಯೋತಿ" ಎಂಬುದನ್ನು ತಿಳಿದು ಜ್ಞಾನ ಅಸಿಯಿಂದ ಛೇದನ ಮಾಡಿ, ತಾನು ಅವಿಭಕ್ತ ಜ್ಯೋತಿಸ್ವರೂಪ ಪರಬ್ರಹ್ಮಸ್ವರೂಪನಾಗಿರುವುದನ್ನೂ, ಅಕರ್ತ ಅಭೋಕ್ತನಾಗಿ ವಿಷಯಭೋಗಗಳ ಬಂಧನಗಳಿಗೆ ಸಿಗದೆ ಸುಖಿಯಾಗಿ ನವದ್ವಾರಪುರದ ದೇಹದಲ್ಲಿ ಪರಂ ಆಗಿ ಅಧ್ಯಾತ್ಮನಾಗಿ ಇರುವುದನ್ನೂ ತಿಳಿಯಬೇಕು. ಈ ರೀತಿ 'ಅಸಂಗಶಸ್ತ್ರ, ಜ್ಞಾನ ಅಸಿಯ' ಛೇದನದಿಂದ, ಇಂದ್ರಿಯಾರ್ಥಗಳಿಂದಲೂ, ಇಂದ್ರಿಯಗಳಿಂದಲೂ, ಮನ-ಬುದ್ಧಿ ಅಹಂಕಾರಗಳಿಂದಲೂ, ತಾನು ಪರಂ ಆಗಿ ಜ್ಯೋತಿಸ್ವರೂಪದ ಅಧ್ಯಾತ್ಮನಾಗಿರುವುದನ್ನು ತಿಳಿದಿರುವವನಿಗೆ, ವಾಸುದೇವನ ಸಾಕ್ಷಾತ್ಪರಬ್ರಹ್ಮ ದರ್ಶನವೂ ಮತ್ತು ಆ ವಾಸುದೇವನಾದ ಸಾಕ್ಷಾತ್ ಪರಬ್ರಹ್ಮನಲ್ಲಿ ಮನ-ಬುದ್ಧಿಗಳ ಅರ್ಪಣವೂ ಸಾಧ್ಯವೇ ವಿನಃ ಇತರರಿಗೆ ಸಾಧ್ಯವಾಗಿರುವುದಿಲ್ಲ. ಅಧ್ಯಾತ್ಮನಾದ ಈ ಧೀರನು ಮನ-ಬುದ್ಧಿ-ಅಹಂಕಾರಗಳನ್ನು ಸಾಕ್ಷಾತ್ ಪರಬ್ರಹ್ಮನಲ್ಲಿ (ಪರಂಜ್ಯೋತಿಸ್ವರೂಪನಲ್ಲಿ) ಅರ್ಪಣಮಾಡಿ, ಜೀವನಾದ ತನಗೂ, ಜೀವನಂತೆ ಮನುಷ್ಯದೇಹದ ವಾಸುದೇವನಂತೆ ಕಾಣುವ ಸಾಕ್ಷಾತ್ ಅವಿಭಕ್ತನಾದ ಪರಬ್ರಹ್ಮನಿಗೂ ಇರುವ ಅನನ್ಯಭಾವವನ್ನೂ ಸಾಧರ್ಮ್ಯಗಳನ್ನೂ ವಿಚಾರ ವಿಮರ್ಶಪೂರ್ವಕವಾಗಿ ತಿಳಿದು, ಜೀವನಿಗೂ ಪರಬ್ರಹ್ಮನಿಗೂ ಇರುವ ಏಕತ್ವವನ್ನೂ ಅದೇ ರೀತಿಯಲ್ಲಿ ವಿಚಾರ ವಿಮರ್ಶೆಗಳಿಂದ ತಿಳಿಯಬೇಕು. ಈ ಸಾಧನಗಳಿಗೆ 'ಅನನ್ಯಭಕ್ತಿ'ಸಾಧನ, 'ಏಕಭಕ್ತಿ'ಸಾಧನಗಳೆಂದು ಹೆಸರು. ಈ ಸಾಧನಗಳ ಅಂತ್ಯಫಲವೇ 'ವಿಜ್ಞಾನ ಅಗ್ನಿ'. ಈ ವಿಜ್ಞಾನ ಅಗ್ನಿಯನ್ನು ಗೀತಾಚಾರ್ಯನು "ಪರಂಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ । ಯಜ್ಜ್ಞಾತ್ವಾ ಮುನಯಸ್ಸರ್ವೇ ಪರಾಂಸಿದ್ಧಿಮಿತೋಗತಾಃ ॥" ಎಂದು ಹೇಳಿರುತ್ತಾನೆ.

## ಅಪರೋಕ್ಷ ದರ್ಶನ–ಅಪರೋಕ್ಷ ಅನುಭವ

೫. ಜ್ಞೇಯನಾದ ಜ್ಯೋತಿಸ್ವರೂಪದ ಪರಬ್ರಹ್ಮನನ್ನು ಆವರಣ ಮಾಡಿ, ಸದಸದ್ರೂಪದ ಚರಾಚರ ಜಗತ್ತಿಗೆ ಕಾರಣವಾಗಿ ಜಗಜ್ಜನನಿ ಎಂದು ಹೆಸರು ಪಡೆದು, ಇರುವ ಮತ್ತು ಅಜ್ಞಾನಾವೃತನಾದ ಜೀವನ ತತ್ವತಃ ಜ್ಞಾನವನ್ನು ಅಪಹರಣಮಾಡಿ ವಿಪರೀತ ದರ್ಶನವನ್ನುಂಟು ಮಾಡಿರುವ ಅನಾದಿಕಾಲದ 'ಅಜ್ಞಾನವು,' ಈ ಜ್ಞಾನಾಗ್ನಿ ವಿಜ್ಞಾನಾಗ್ನಿ ಗಳಿಂದ ಪುನರಾವರ್ತಿ ಇಲ್ಲದಂತೆ ಭಸ್ಮವಾಗುತ್ತದೆ. ಅಮೃತ ಸುಖಾನುಭವಕ್ಕೆ ಅನಾದಿಕಾಲದಿಂದ ಪ್ರತಿಬಂಧಕವಾಗಿದ್ದ ಅಜ್ಞಾನವು ಭಸ್ಮವಾಗಲು, ಪ್ರಿಯ-ಅಪ್ರಿಯ ರೂಪಗಳಿಂದಲೂ ಹೆಸರುಗಳಿಂದಲೂ ಪ್ರಸಿದ್ಧವಾಗಿದ್ದ ಸ್ವರ್ಗಲೋಕ, ಬ್ರಹ್ಮಲೋಕ, ವಿಷ್ಣುಲೋಕ, ಕೈಲಾಸ ಲೋಕ ಮತ್ತು ನರಕಲೋಕಗಳೂ, ಸುಖ-ದುಃಖ-ವ್ಯಥೆ-ಭಯಗಳನ್ನು ಉಂಟುಮಾಡಲು ಅರ್ಹತೆ ಇಲ್ಲದ 'ಮಿಥ್ಯಾದೃಶ್ಯ ಮಿಥ್ಯಾದರ್ಶನ' ಗಳೆಂದು ಸ್ಪಷ್ಟವಾಗಿ ತಿಳಿದುಬಂದು ಜೀವಭೂತನು ಜ್ಞೇಯನಾದ ತನ್ನ ಪರಬ್ರಹ್ಮಸ್ವರೂಪದ ಅಮೃತ ಸುಖವನ್ನು ಅನುಭವಿಸುತ್ತಾನೆ. ಈ ರೀತಿಯ ಅಮೃತ ಸುಖದ ಲಾಭವೇ ಭಕ್ತಿಸಾಧನಗಳ 'ಪರಮಫಲ'. ಗೀತಾಚಾರ್ಯನು ಭಕ್ತಿಸಾಧನವನ್ನೂ ಸಾಧನದ 'ಪರಮಫಲವಾದ ಅಮೃತಸುಖ' ಅನುಭವವನ್ನೂ ಈ ರೀತಿ ಹೇಳಿದ್ದಾನೆ:

**ಭಕ್ತಿಸಾಧನ** (ಅನನ್ಯಭಕ್ತಿ ಏಕಭಕ್ತಿ–ಜ್ಞಾನಲಕ್ಷಣದ ಭಕ್ತಿ–ಪರಬ್ರಹ್ಮಾರ್ಪಣ)—

> ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ
> ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೆ ॥

**ಅಮೃತಸುಖದ ಅಪರೋಕ್ಷ ಅನುಭವ** (ಅಭಾವವಿಲ್ಲದ ಪೂರ್ಣಸುಖ ಅನುಭವ)—

> ಬ್ರಹ್ಮಣೋಹಿ ಪ್ರತಿಷ್ಠಾಹಂ ಅಮೃತಸ್ಯಾವ್ಯಯಸ್ಯ ಚ
> ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥
> ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮರ್ಜುನ ॥ (ಜ್ಞಾನದೀಪ)

**ಪರಿಚಿಂತನ** = "ಪರಿ" ಉಪಸರ್ಗ ವಿಚಾರ ವಿಮರ್ಶೆ ಸೂಚಕ

—**ಕೆ. ವಿ. ಆರ್.**

# ವಿಷಯಾನುಕ್ರಮಣಿಕೆ

# ಜಗದ್ಗುರು ಸಾಕ್ಷಾತ್ಪರಬ್ರಹ್ಮ ಕೃಷ್ಣ ಅರ್ಜುನ ಸಂವಾದ



ಪಶ್ಯಮೇಯೋಗಮೈಶ್ವರಮ್—ಜಗತ್

(i) ಜ್ಞಾನ = ಸಂಮೋಹವನ್ನು ಭಸ್ಮಮಾಡುವ ಅಗ್ನಿ. (ii) ವಿಜ್ಞಾನ = ಅಜ್ಞಾನವನ್ನು ಭಸ್ಮಮಾಡುವ ಪ್ರಜ್ವಲಿತ ಅಗ್ನಿ. (iii) ಮೋಕ್ಷ = ಅಜ್ಞಾನಸಂಮೋಹ ಬಂಧನಗಳಿಂದ ಬಿಡುಗಡೆ. (iv) ಪರಮಫಲ = ಪ್ರಿಯ ಅಪ್ರಿಯ ಜಗತ್ತಿನ ಮಿಥ್ಯಾದರ್ಶನ. ಶಾಶ್ವತವಾದ ಅಮೃತಸುಖ ಅನುಭವ.

**ಯೋಗೇಶ್ವರಃ ಕೃಷ್ಣ** (ಮಾಮೇಕಂ ಶರಣಂವ್ರಜ ನ ಪ್ರಕೃತಿಂ ಶರಣಂಗಚ್ಛ)—

ಜ್ಞಾನಂತೇ ಹಂಸವಿಜ್ಞಾನಂ ಇದಂ ವಕ್ಷ್ಯಾಮ್ಯಶೇಷತಃ
ಯಜ್ಞಾತ್ವಾ ನೇಹ ಭೂಯೋಽನ್ಯತ ಜ್ಞಾತವ್ಯ ಮವಶಿಷ್ಯತೇ (ಜ್ಞೇಯಬ್ರಹ್ಮ).
ಮಯಾ ತತಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ (ಪ್ರಕೃತಿ—ಜಗತ್)
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ (ಜಗತಃಪರಃ)
ನ ಚ ಮತ್ಸ್ಥಾನಿ ಭೂತಾನಿ 'ಪಶ್ಯಮೇ ಯೋಗಮೈಶ್ವರಂ' (ಜಗತ್ತಿನಮಿಥ್ಯತ್ವ)
ತ್ರಿಭಿರ್ಗುಣಮಯೈರ್ಭಾವೈಃ ಏಭಿಸ್ಸರ್ವಮಿದಂ ಜಗತ್ (ಸರ್ವಭಾವ = ಜಗತ್ತು)
'ಮೋಹಿತಂ ನಾಭಿ ಜಾನಾತಿ' ಮಾಮೇಭ್ಯಃ ಪರಮವ್ಯಯಂ (ಮುಹ್ಯಂತಿಜಂತವಃ)
ಅನಿತ್ಯಮಸುಖಂ ಲೋಕಂ ಇಮಂ ಪ್ರಾಪ್ಯ ಭಜಸ್ವಮಾಂ (ಮೋಕ್ಷಕ್ಕೆ ಅಧಿಕಾರಿ)
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ (ಸರ್ವ = ಪ್ರಕೃತಿ)
ಪಶ್ಯಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ
ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ (ಪರೋಕ್ಷ ದರ್ಶನ)
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಂ (ಜಗದ್ರೂಪವ ಮನುಷ್ಯ)
ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ ಮಾಂ ಪ್ರಪದ್ಯತೇ
"ವಾಸುದೇವಸ್ಸರ್ವಮಿತಿ" ಸಮಹಾತ್ಮಾ ಸುದುರ್ಲಭಃ ॥ (ಸರ್ವಂ = ಜಗತ್)

(ವಾಸುದೇವಸ್ಸರ್ವಂ = ವಾಸುದೇವನು ಜಗದ್ರೂಪನು = ಜಗತಃಪರನು—ಸಗುಣಬ್ರಹ್ಮ = ಪರಬ್ರಹ್ಮ = ಅಭಾವವಿಲ್ಲದ ಸತ್—ಪೂರ್ಣವಸ್ತು.)

# ಗೀತಾಚಾರ್ಯನ ಪರಬ್ರಹ್ಮೋಪದೇಶ

ಮತ್ತು

# ಅರ್ಜುನನ ವಿಮರ್ಶೆ

---

## ಪ್ರಥಮ ಪ್ರಕರಣ

### ವಾಸುದೇವನು ವಿಶ್ವರೂಪನು ಮತ್ತು ವಿಶ್ವೇಶ್ವರನು; ಬ್ರಹ್ಮ-ವಿಷ್ಣು-ಮಹೇಶ್ವರ ಸ್ವರೂಪದ ಸಾಕ್ಷಾತ್ಪರಬ್ರಹ್ಮನು ಜಗದ್ಗುರು

೧. **ಅರ್ಜುನ.**—ನಾನು ವಾಸುದೇವನಾದ ನಿನ್ನನ್ನು ವಸುದೇವ ದೇವಕಿಯರ ಮಗ, ಯಾದವ ಕುಲದಲ್ಲಿ ಜನಿಸಿದ ಕೃಷ್ಣ ಎಂದು ಇತರ ಮನುಷ್ಯರನ್ನು ಕಂಡಂತೆ ಕಾಣುತ್ತಿದ್ದೆ. ಆದರೆ ನೀನು "ಪಶ್ಯಮೇ ಯೋಗ ಮೈಶ್ವರಂ" ಎಂದು ಹೇಳಿ ತೋರಿಸಿದ ವಿಶ್ವರೂಪವನ್ನು ನೀನು ಕೊಟ್ಟ ದಿವ್ಯ ಚಕ್ಷುಸ್ಸಿನಿಂದ ಕಂಡಮೇಲೆ, ನಾನು ತಿಳಿದಿದ್ದಂತೆ ನೀನು ಮನುಷ್ಯ ಮಾತ್ರದವನಲ್ಲ. ನೀನು ವೈಶ್ವಾನರನು, ವಿಶ್ವರೂಪದ ಮನುಷ್ಯನು, "ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರನು" ಎಂದು ತಿಳಿಯಿತು. ವಿಷ್ಣು ಸ್ವರೂಪನಾದ ನಿನ್ನ ವಿಶ್ವರೂಪದ ಸೌಮ್ಯರೂಪವನ್ನು ಕಂಡು ನನಗೆ ಹರ್ಷವಾಯಿತು. ಸುರಸಂಘಗಳೂ ಮಹರ್ಷಿಸಂಘಗಳೂ ನಿನ್ನ ಅಪಾರಮಹಿಮೆಯನ್ನು ಕಂಡು ಹರ್ಷದಿಂದ ಸ್ತುತಿಸಿದ್ದನ್ನು ಕಂಡೆ. ಸಂಹಾರಕರ್ತನಾದ ನಿನ್ನ ಪ್ರಜ್ವಲಿತವಾದ ಉಗ್ರರೂಪವನ್ನು ಕಂಡು ನನಗೆ ಮನದಲ್ಲಿ ಭಯವೂ ವ್ಯಥೆಯೂ ಆದುವು. ನಿನ್ನ ಉಗ್ರರೂಪ ವನ್ನು ತಮ್ಮ ಸ್ವಚಕ್ಷುಗಳಿಂದಲೇ ಕಂಡ ಭೀಷ್ಮ ದ್ರೋಣರು ಪ್ರಜ್ಞೆ ತಪ್ಪಿದ ಪತಂಗಗಳು ಅಗ್ನಿ ಜ್ವಾಲೆಯನ್ನು ನೋಡುತ್ತ ನೋಡುತ್ತ ಪ್ರವೇಶಿಸುವಂತೆಯೂ, ಧಾರ್ತರಾಷ್ಟ್ರರು ನದೀಪ್ರವಾಹಗಳು ಶಾಂತಿ ಯಿಂದ ಒಂದು ಕಡೆ ನಿಲ್ಲಲು ಆಗದೆ ಅವಶವಾಗಿ ತೀವ್ರ ವೇಗದಿಂದ

ಸಮುದ್ರವನ್ನೇ ಸೇರುವಂತೆಯೂ, ನಿನ್ನ ಭಯಂಕರವಾದ ಮುಖವನ್ನೇ ಪ್ರವೇಶಿಸಿ ಹಲ್ಲುಗಳಿಗೆ ಸಿಕ್ಕಿ ಚೂರ್ಣವಾದುದನ್ನು ನಾನು ಕಂಡೆನು. ನೀನು ವಿಶ್ವವ್ಯಾಪಕನಾಗಿರುವದರಿಂದ ವಾಯು, ಯಮ, ಅಗ್ನಿ, ವರುಣ, ಸೂರ್ಯ, ಚಂದ್ರ ಇತ್ಯಾದಿ ಸರ್ವರೂ ನಿನ್ನ ಅಧೀನರಾಗಿ ಭಯಭಕ್ತಿಗಳಿಂದ ವರ್ತಿಸುತ್ತಿರುವುದನ್ನೂ ಕಂಡೆನು. ನೀನು ಅನಂತವೀರ್ಯನು ಅಮಿತವಿಕ್ರಮನು ಅನಂತಮಹಿಮನು ಎಂದು ತಿಳಿದುಬಂದಿತು. ತೇಜೋವಂತರಾದ ಆದಿತ್ಯರಿಗೆ ಶ್ರೇಷ್ಠನಾದ ವೈಕುಂಠವಾಸಿಯಾದ 'ವಿಷ್ಣು'ವನ್ನೂ, 'ಸಂಹಾರ ಕರ್ತರಾದ ರುದ್ರರಿಗೆ ಶ್ರೇಷ್ಠನಾದ' ಕೈಲಾಸವಾಸಿಯಾದ 'ಶಂಕರನನ್ನೂ,' ಬ್ರಹ್ಮಲೋಕವಾಸಿಯಾದ ಕಮಲಾಸನಸ್ಥನಾದ ಸೃಷ್ಟಿಕರ್ತನಾದ 'ಬ್ರಹ್ಮ'ನನ್ನೂ ನಿನ್ನ ವಿಶ್ವರೂಪ ದೇಹದಲ್ಲಿ ನಾನು ಕಂಡೆನು. "ಇವರೆಲ್ಲರೂ ನಿನ್ನ ವಿಭೂತಿಗಳು" ಎಂದು ತಿಳಿದುಬಂದಿತು.

> ನ ತ್ವತ್ಸಮೋಸ್ತ್ಯಭ್ಯಧಿಕಃ ಕುತೋನ್ಯೋ ಲೋಕತ್ರಯೇ
> ಪ್ಯಪ್ರತಿಮ ಪ್ರಭಾವ ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ॥

ಎಂದು ಹೇಳಿ ಸಾಷ್ಟಾಂಗ ನಮಸ್ಕಾರ ಮಾಡಿದೆನು. ನಾನು ನಿನ್ನ ಮಹಿಮೆಯನ್ನು ಕಾಣದೆ ಅಸಡ್ಡೆಯಿಂದ ವರ್ತಿಸುತ್ತಿದ್ದುದಕ್ಕಾಗಿ ಅಪರಾಧ ಕ್ಷಮಾಪಣೆಯನ್ನು ಕೇಳಿಕೊಂಡೆನು.

## ಮಹತ್-ಪರಮ-ಉತ್ತಮ ವಿಶೇಷಣಗಳಿಂದ ಜಗದ್ಗುರುವೆಂದು ಪ್ರಸಿದ್ಧಿ

೨. ನೀನು ಲೋಕದಲ್ಲೂ ವೇದದಲ್ಲೂ ಮಹೇಶ್ವರನು, ಪರಮಾತ್ಮನು, ಪರಬ್ರಹ್ಮನು, ಪರಮೇಶ್ವರನು, ಪುರುಷೋತ್ತಮನು, ತ್ರಿಗುಣಾತೀತನು, ಕ್ಷರ ಅಕ್ಷರ ಅತೀತನು ಎಂದು ಪ್ರಸಿದ್ಧಿ ಎಂದು ಹೇಳಿದ್ದೀಯೆ. ನೀನು ನಿನ್ನ ಸ್ವರೂಪವನ್ನು "ಮಹ, ಪರಮ, ಉತ್ತಮ" ಇತ್ಯಾದಿ ವಿಶೇಷಣಗಳಿಂದ ಯಾತಕ್ಕೆ ಹೇಳಿದಿ ಎನ್ನುವುದನ್ನು ವಿಚಾರ ವಿಮರ್ಶೆಗಳಿಲ್ಲದೆ ತಿಳಿಯುವದಕ್ಕಾಗುವುದಿಲ್ಲ. ನೀನು ವಿಶ್ವರೂಪನಾಗಿರುವುದನ್ನೂ ವಿಶ್ವೇಶ್ವರನಾಗಿರುವುದನ್ನೂ ತೋರಿಸಿ, ಸದಸದ್ರೂಪದ

ಚರಾಚರ ಜಗತ್ತಿಗೆ ಪರಂ ಆದ ಪರಬ್ರಹ್ಮನೆಂದು ಜ್ಞಾನೋಪದೇಶವನ್ನು ಮಾಡಿ,

ಇತಿತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥

ಎಂದು ಹೇಳಿದ್ದಿ. ಆದ್ದರಿಂದ ನಿನ್ನನ್ನು ತತ್ವತಃ ತಿಳಿಯಬೇಕಾಗಿದ್ದರೆ ಚಕ್ಷುಸ್ಸಿನಿಂದ 'ದರ್ಶನ', ಶ್ರೋತ್ರೇಂದ್ರಿಯದಿಂದ 'ಶ್ರವಣ', ಎರಡು ಆದರೆ ಸಾಲದು. ಬುದ್ಧಿ-ಮನಗಳಿಂದ 'ವಿಚಾರ ವಿಮರ್ಶೆ'ಗಳೂ ಅತ್ಯವಶ್ಯಕ ಎಂದು ಅರ್ಥವಾಯಿತು.

ನೀನು ನನಗೆ 'ದಿವ್ಯಚಕ್ಷು'ಸ್ಸನ್ನು ಕೊಟ್ಟು ವಿಶ್ವರೂಪವನ್ನು ಪ್ರದರ್ಶಿಸಿ ನಿನ್ನ ಅಪಾರಮಹಿಮೆಯನ್ನು ತೋರಿಸಿದುದಕ್ಕಾಗಿ ನಾನು ನಿನ್ನನ್ನು ಪ್ರಸಿದ್ಧ ಪುರುಷನೆಂದು ತಿಳಿಯುವುದಿಲ್ಲ. ಏಕೆಂದರೆ ವಿಶ್ವ ರೂಪ ದರ್ಶನವನ್ನು ಅನೇಕರು ತೋರಿಸಿರುತ್ತಾರೆ. ವಿಶ್ವರೂಪ ದರ್ಶನದ ಅನುಭವವು ಸ್ವಪ್ನಾವಸ್ಥೆಯಲ್ಲಿ ನನ್ನ ಅನುಭವದಲ್ಲೂ ಇರುತ್ತದೆ. ಶಸ್ತ್ರ ಅಸ್ತ್ರ ಪ್ರವೀಣರಾದ ಭೀಷ್ಮದ್ರೋಣರನ್ನೂ ಪ್ರಬಲ ಶತೃಗಳಾದ ಧಾರ್ತ ರಾಷ್ಟ್ರರನ್ನೂ "ಮಯ್ಯೈವ ತೇ ನಿಹತಾ ಪೂರ್ವಮೇವ" ಎಂದು ನನಗೆ ಹೇಳಿರುವಂತೆ ನೀನು ಅವರಿಗೆ 'ಕಾಲಮೃತ್ಯು'ವಾಗಿರುವುದನ್ನು ಕಂಡು, ನಿನ್ನನ್ನು ಲೋಕದಲ್ಲೂ ವೇದದಲ್ಲೂ ಪ್ರಸಿದ್ಧ ಎಂದು ತಿಳಿಯುವು ದಿಲ್ಲ. ಏಕೆಂದರೆ ನಿನ್ನ ಹನನ ಕೃತ್ಯವು ನಿನಗೆ ವೇದಗಳಲ್ಲಿ ಹೇಳಿರುವ ಪ್ರಸಿದ್ಧಿಗೆ ಕಾರಣವಾಗಿರುವುದಿಲ್ಲ. ನೀನು (i) ಸದಸದ್ರೂಪದ ಜಗತ್ತಿಗೆ ಕಾರಣವಾದ ಅಜ್ಞಾನಕ್ಕೆ 'ಅಕಾಲಮೃತ್ಯುವಾಗಿ', ಸದಸದ್ರೂಪದ ಜಗತ್ತನ್ನು ಮಿಥ್ಯಾರೂಪದ ದೃಶ್ಯದಂತೆ ಮಾಡುವ ಸಾಮರ್ಥ್ಯದಿಂದ ಕೂಡಿರುವುದರಿಂದಲೂ, (ii) ಅಜ್ಞಾನದಿಂದ ಆವೃತನಾಗಿ ನವದ್ವಾರ ಪುರ ದೇಹದಲ್ಲಿ ಧಾವಂತವನ್ನು ಪಡುತ್ತಿರುವ ಜೀವನ ಅನಾದಿ ಅಜ್ಞಾನ ವನ್ನು ಭಸ್ಮಮಾಡಿ ಜೀವನನ್ನು ಪರಬ್ರಹ್ಮನ ಸಾಧರ್ಮ್ಯಗಳಿಂದ ಅನನ್ಯ ನಂತೆ ಮಾಡುವ ಸಾಮರ್ಥ್ಯದಿಂದ ಕೂಡಿರುವವನಾಗಿರುವುದರಿಂದಲೂ ಮತ್ತು (iii) ಅಜ್ಞಾನ ಆವೃತನಾದ ಜೀವನನ್ನು ಪರಂ ಬ್ರಹ್ಮನಾದ ನಿನ್ನಂತೆಯೇ "ಏಕಮೇವ ಅದ್ವಿತೀಯಂ ಬ್ರಹ್ಮ" ನನ್ನಾಗಿ ಮಾಡುವ

ಸಾಮರ್ಥ್ಯದಿಂದ ಕೂಡಿರುವುದರಿಂದಲೂ, ನಿನಗೆ ವೇದದಲ್ಲೂ ಲೋಕದಲ್ಲೂ ಪ್ರಸಿದ್ಧಿ ಎಂದು ತಿಳಿದಿದ್ದೇನೆ. ನೀನು ಸೂರ್ಯವಂಶ ಕಾಲದಲ್ಲಿ, ಜೀವಭೂತನಾಗಿದ್ದ ವಿವಸ್ವತನನ್ನು ಏಕಮೇವ ಅದ್ವಿತೀಯ ಬ್ರಹ್ಮನನ್ನಾಗಿ ಮಾಡಿದ್ದಲ್ಲದೆ ಅವನನ್ನು ಇತರರನ್ನೂ ಏಕಮೇವ ಅದ್ವಿತೀಯ ಬ್ರಹ್ಮರನ್ನಾಗಿ ಮಾಡುವ ಸಾಮರ್ಥ್ಯವಂತನನ್ನಾಗಿ ಮಾಡಿದೆ ಎಂದೂ ಹೇಳಿದ್ದಿ. ನಿನ್ನ ಉಪದೇಶವನ್ನು ಅನುಷ್ಠಾನಮಾಡಿ ಏಕಮೇವ ಅದ್ವಿತೀಯ ಬ್ರಹ್ಮನಾದ ವಿವಸ್ವತನು, ಜೀವಭೂತನಾಗಿದ್ದ ಮನುವಿಗೆ ಉಪದೇಶವನ್ನು ಮಾಡಲು ಮನುವು ಆ ಉಪದೇಶವನ್ನು ಅನುಷ್ಠಾನ ಮಾಡಿ ಏಕಮೇವ ಅದ್ವಿತೀಯ ಬ್ರಹ್ಮನಾದುದನ್ನೂ ಹೇಳಿದ್ದಿ. ಈ ರೀತಿಯಾಗಿ ಜೀವಭೂತರಾದ ನವದ್ವಾರ ಪುರದ ದೇಹಿಗಳನ್ನು ಏಕಮೇವ ಅದ್ವಿತೀಯ ಬ್ರಹ್ಮರನ್ನಾಗಿ ಮಾಡುವ ಸಾಮರ್ಥ್ಯ, ತ್ರಿಗುಣಾತೀತನಾದ ಕ್ಷರಅಕ್ಷರ ಅತೀತನಾದ ನಿನ್ನನ್ನು ಬಿಟ್ಟರೆ ಇನ್ನ್ಯಾರಲ್ಲೂ ಇಲ್ಲವಾದುದರಿಂದ ಲೋಕದಲ್ಲೂ ವೇದದಲ್ಲೂ "ಉತ್ತಮ, ಮಹ, ಪರಮ" ಎಂಬ ವಿಶೇಷಣಗಳಿಂದ ಪುರುಷೋತ್ತಮ, ಮಹೇಶ್ವರ, ಪರಮೇಶ್ವರ, ಪರಬ್ರಹ್ಮ ಇತ್ಯಾದಿ ಹೆಸರುಗಳಿಂದ ಪ್ರಸಿದ್ಧನಾಗಿದ್ದಿ ಎಂದು ತಿಳಿದಿರುತ್ತೇನೆ.

೩. ಆದ್ದರಿಂದ ನಾನು ಮನದಲ್ಲಿನ ವಿಮೂಢಭಾವದಿಂದ ವಾಸುದೇವ ದೇಹದಲ್ಲಿ ಜೀವಭೂತನಂತೆ ಕಾಣುತ್ತಿರುವ ನಿನ್ನನ್ನು ಜಗತಃ ಪರಃ; ವಿಶ್ವರೂಪಪರಃ, ತಮಸಃಪರಃ, ಸದಸತ್ಪರಃ ಎಂದು ತಟಸ್ಥ ಲಕ್ಷಣದಿಂದ ತಿಳಿಯುತ್ತೇನೆ. ವಾಸುದೇವನಾದ ನೀನೇ (i) ಅಜ್ಞಾನಾವೃತನಾದ ಸ್ವಚಾಕ್ಷುಷನಿಗೆ, ನವದ್ವಾರಪುರದ ವ್ಯಷ್ಟಿರೂಪದ 'ಮನುಷ್ಯ'ನಂತೆಯೂ (ii) ಭಕ್ತಿಶ್ರದ್ಧೆಗಳಿಂದ ಕೂಡಿದ ದಿವ್ಯಚಕ್ಷುವುಳ್ಳವನಿಗೆ, ವಿಶ್ವರೂಪದ ಮನುಷ್ಯನಂತೆಯೂ ಅಂದರೆ ವಿರಾಟ್‌ಪುರುಷನಂತೆಯೂ ಸಮಷ್ಟಿರೂಪದ 'ಈಶ್ವರ'ನಂತೆಯೂ (iii) ಅನನ್ಯ ಭಕ್ತಿ ಸಾಧನದ ಜ್ಞಾನಚಕ್ಷುಷನಿಗೆ, ಅಸಂಸಾರಿಯಾದ ಜಗತಃಪರನಾದ ಅವಿಭಕ್ತನಾದ "ಸಗುಣಬ್ರಹ್ಮನಂತೆಯೂ" (iv) ಏಕಭಕ್ತಿಸಾಧನದಿಂದ ತ್ರಿಗುಣಾತೀತನಾಗಿ ಕ್ಷರ ಅಕ್ಷರ ಅತೀತನಾಗಿ ಜ್ಞಾನಚಕ್ಷುಷನೂ

ತತ್ತ್ವದರ್ಶಿಯೂ ಆದವನಿಗೆ, ಅವಿಭಕ್ತನಾದ "ನಿರ್ಗುಣ ಬ್ರಹ್ಮನಾದ ಏಕಮೇವ ಅದ್ವಿತೀಯನಾದ ಪರಬ್ರಹ್ಮನಂತೆಯೂ," ಒಬ್ಬೊಬ್ಬರಿಗೆ ಒಂದೊಂದು ತರಹ ಅವರವರ ಚಕ್ಷುವಿನಲ್ಲಿನ ಕಲ್ಮಷ ಕಶ್ಮಲಗಳನ್ನು ಅನುಸರಿಸಿ ಅನೇಕ ವಿಧವಾಗಿ ಅನಂತರೂಪಗಳಿಂದ ಕಾಣುತ್ತಿದ್ದಿ ಎಂದು ನಿಶ್ಚಯಿಸಿ ತಿಳಿದಿದ್ದೇನೆ. ನೀನು ನಿನ್ನ ಸ್ವರೂಪವನ್ನು "ಜ್ಯೋತಿಷಾಮಪಿ ತಜ್ಜ್ಯೋತಿ" ಎಂದೂ "ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ" ಎಂದೂ ಹೇಳಿರುವುದರಿಂದ ನಾನು ನಿನ್ನನ್ನು ವಸುದೇವ ದೇವಕಿಯರ ಮಗ, ಯಾದವಕುಲದ ಕೃಷ್ಣ ಎಂದು ಕಾಣುವದಿಲ್ಲ. "ನೀನು ಅಮೃತಸ್ವರೂಪನು"; 'ಸದಸಚ್ಚ' ಎಂದು ಹೇಳಲ್ಪಟ್ಟಿರುವ ಕೃತ್ಸ್ನಜಗತ್ತಿಗೆ ಅತೀತನು; ಅಜ್ಞಾನ ಆವೃತನಾದ ದ್ರಷ್ಟೃವಿನ ವಿಮೂಢ ಭಾವದ ದೃಶ್ಯವಾದ ಕೃತ್ಸ್ನಜಗತ್ತಿಗೆ ಮೃತ್ಯು, "ಅಜ್ಞಾನ ಸಂಮೋಹಗಳ ಸಂಹಾರ ಕರ್ತನಾದ ಜಗದ್ಗುರು, ಜ್ಯೋತಿಸ್ವರೂಪನು" ಎಂದು ತಿಳಿದಿದ್ದೇನೆ. ವಿಭಕ್ತನಾದ ನವದ್ವಾರಪುರದಲ್ಲಿನ ಜೀವನನ್ನು, ಜಗತ್ತಿಗೆ ಅತೀತನಾದ ಅಜ್ಞಾನ ಸಂಮೋಹಗಳ ಲೇಪವಿಲ್ಲದೆ ಅಜ್ಞಾನ ಸಂಮೋಹಗಳಿಗೆ ಮೃತ್ಯುವಾದ ಪರಬ್ರಹ್ಮನನ್ನಾಗಿ ಮಾಡುವ ಸಾಮರ್ಥ್ಯದಿಂದ ಇರುವ ಸಾಕ್ಷಾತ್ಪರಬ್ರಹ್ಮಸ್ವರೂಪದ 'ಜಗದ್ಗುರು' ಎಂದೂ, ಘಟಾಕಾಶವತ್ ವಿಭಕ್ತನಾದ ದ್ರಷ್ಟೃವೆಂದು ತಿಳಿದಿರುವವನನ್ನು ಅವಿಭಕ್ತನಾದ ಮಹಾಕಾಶವತ್ ನಿರ್ಲಿಪ್ತನಾದ ದ್ರಷ್ಟೃವನ್ನಾಗಿ ಮಾಡುವ ಸಾಮರ್ಥ್ಯವುಳ್ಳ "ಜಗದ್ಗುರು" ಎಂದೂ ತಿಳಿದಿದ್ದೇನೆ.

**ಕಲ್ಮಷ** = ವಿಭಕ್ತಿ ಪ್ರವಿಭಕ್ತಿ ಭೇದಗಳು. ಜೀವ ಜೀವ, ಜೀವೇಶ್ವರ ಭೇಧಗಳು.
"ಅವಿಭಕ್ತಂಚ ಭೂತೇಷು ವಿಭಕ್ತ ಮಿವಚಸ್ಥಿತಂ"

**ಕಶ್ಮಲ** = ಸತ್ವ—ರಜಸ್ಸು—ತಮೋಗುಣಗಳು—ರಾಗ-ಭಯ—ಕ್ರೋಧಗಳು—ಶೋಕ
"ಕುತಸ್ತ್ವಾಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್"

**ಅಜ್ಞಾನ**=ಕಲ್ಮಷಕಶ್ಮಲಗಳಿಗೆಬೀಜದಂತಿರುವಕಾರಣವಸ್ತು.ಜ್ಞಾನಅಪಹರಣವಸ್ತು
"ಅಜ್ಞಾನೇನಾವೃತಂ [ಜ್ಞಾನಂ] ತೇನ ಮುಹ್ಯಂತಿ ಜಂತವಃ"

**ದುಃಖ** = ಸುಖದ ಅಭಾವವೆಂದು ತಿಳಿಯಬಾರದು. ಸುಖ ಜ್ಞಾನಗಳನ್ನು ಅಪಹರಣ ಮಾಡಿರುವ ಅಜ್ಞಾನಜ ವಸ್ತು ಎಂದು ತಿಳಿಯಬೇಕು.

# ದ್ವಿತೀಯ ಪ್ರಕರಣ

## ಅರ್ಜುನನು ದಿವ್ಯಚಕ್ಷುಸ್ಸಿನಿಂದ ವಾಸುದೇವನ ವಿಶ್ವರೂಪ ದೇಹದಲ್ಲಿ ಕಂಡ ವಿಮೂಢಭಾವದ ದೃಶ್ಯಗಳು ದೃಶ್ಯಗಳ ಮಿಥ್ಯಾಸ್ವರೂಪ

೧. **ಅರ್ಜುನ.**—ನೀನು ಸಂವಾದದಲ್ಲಿ ಹೇಳಿರುವ ವಾಕ್ಯಗಳನ್ನು ವಿಮರ್ಶೆಮಾಡಿದರೆ, "ಮಯಾಹತಂ ಪೂರ್ವಮೇವ" ಎಂದು ನೀನು ಹೇಳಿರುವುದನ್ನು ಕೇಳಿದ್ದರೂ, ಭೀಷ್ಮ ದ್ರೋಣರೂ ಧಾರ್ತರಾಷ್ಟ್ರರೂ ಉರಿಯುತ್ತಿರುವ ನಿನ್ನ ಭಯಂಕರವಾದ ಮುಖವನ್ನು ಪ್ರವೇಶಿಸಿ ನಾಶವಾದುದನ್ನು ನಾನೇ ಕಂಡರೂ "ತಸ್ಯ ಕರ್ತಾರಮಪಿ ಮಾಂವಿದ್ಧಿ ಅಕರ್ತಾರಂ ಅವ್ಯಯಂ" ಎಂದು ಪರಮರಹಸ್ಯವನ್ನು ಹೇಳಿರುವುದರಿಂದ ನಿನ್ನನ್ನು ತತ್ವತಃ 'ಅಕರ್ತಾರಂ' ಎಂದೇ ನಿಶ್ಚಯಿಸಿರುತ್ತೇನೆ. ಆದರೆ ಹನನಕೃತ್ಯ ನಡೆದಿರುವದನ್ನು ನೀನೇ ನೋಡಿದೆಯಲ್ಲಾ ಎಂದರೆ,

**ಅಜ್ಞಾನ—** ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ
**ವಿಮೂಢಾತ್ಮ—** ಅಹಂಕಾರವಿಮೂಢಾತ್ಮಾ ಕರ್ತಾ ಅಹಂ ಇತಿ ಮನ್ಯತೆ ॥
**ಅಜ್ಞಾನ—** ಪ್ರಕೃತ್ಯೈವಚಕರ್ಮಾಣಿ ಕ್ರಿಯಮಾಣಾನಿ ಸರ್ವಶಃ
ಪ್ರಕೃತಿ ಸೂಯತೇ ಸಚರಾಚರಂ—ಸ್ವಭಾವಸ್ತು ಪ್ರವರ್ತತೇ
**ತತ್ವವಿತ್—** ಯಃ ಪಶ್ಯತಿ ತಥಾತ್ಮಾನಂ ಅಕರ್ತಾರಂ ಸ ಪಶ್ಯತಿ ॥

ಹನನ ಕೃತ್ಯನಡೆದಿರುವುದನ್ನು ನಾನು ನೋಡಿದರೂ, ಆ ಕೃತ್ಯವನ್ನು ನೀನು ಮಾಡಲಿಲ್ಲ; ನೀನು ಅಕರ್ತಾರನು; ಕೃತ್ಯ ನಡೆದಿರುವುದು ಪ್ರಕೃತಿ ಗುಣಗಳಿಂದ ನಡೆದಿರಬೇಕು ಎಂದು ತಿಳಿದಿದ್ದೇನೆ. ನೀನು ನನ್ನನ್ನು "ನಿಮಿತ್ತಮಾತ್ರಂ ಭವ ಸವ್ಯಸಾಚಿನ್", ನಿಮಿತ್ತಮಾತ್ರದ ಕರ್ತೃತ್ವದಿಂದ ಕರ್ಮಮಾಡಿದರೆ ಸಾಕು; ಯಶಸ್ಸು, ರಾಜ್ಯ ಸುಲಭವಾಗಿ ಲಭಿಸುತ್ತದೆ ಎಂದು ಹೇಳಿದ್ದಿ. ಆದರೆ ಸಂವಾದದಲ್ಲಿ ನೀನು "ಯಃ ಪಶ್ಯತಿ ತಥಾತ್ಮಾನಂ ಅಕರ್ತಾರಂ ಸ ಪಶ್ಯತಿ" ಎಂದೂ "ಅಹಂಕಾರ ವಿಮೂಢಾತ್ಮಾ ಅಹಂಕರ್ತಾ ಇತಿ ಮನ್ಯತೆ" ಎಂದೂ ಹೇಳಿರುತ್ತಿ. ಹೀಗೆ ಹೇಳಿರುವುದನ್ನು ನೋಡಿದರೆ, ನಾನು ಅಹಂಕಾರ ವಿಮೂಢಾತ್ಮನು

ಎಂದು ತಿಳಿದು ನನಗೆ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ಎಂದು ಹೇಳಿರಬೇಕು. ಪ್ರಕೃತಿಸ್ಥನಾಗಿ ವಿಮೂಢಭಾವದಿಂದ, ಅಹಂಕಾರದ ಕರ್ತೃತ್ವವನ್ನು ವಿಪರೀತ ಭಾವನೆಯಿಂದ, ಅಹಂಕರ್ತಾ ಎಂದು ನಾನು ಆವಾಹನೆಮಾಡಿಕೊಳ್ಳದಿದ್ದರೆ, ನೀನು ನನಗೆ ಆ ರೀತಿ ಹೇಳುತ್ತಿರಲಿಲ್ಲ. ಆದ್ದರಿಂದ ತತ್ವತಃ ನೀನು ಹೇಗೆ ಅಕರ್ತಾರನೋ ಹಾಗೆಯೇ ತತ್ವತಃ ನಾನೂ ಅಕರ್ತಾರನೆಂದೇ ನಿಶ್ಚಯಿಸಿರುತ್ತೇನೆ. "ಮಯ್ಯೈವ ತೇ ನಿಹತಾಃ" ಎಂದು ನೀನು ಹೇಳಿರುವಂತೆ ಭೀಷ್ಮ ದ್ರೋಣರೇನಾದರೂ ಹತರಾಗಿದಾರೆಯೇ ಅಂದರೆ, ಅದೂ ಇಲ್ಲ. ಅವರು ಅಶೋಚ್ಯರು.

**ಜೀವ-ಅಧ್ಯಾತ್ಮ ಸ್ವರೂಪ ಲಕ್ಷಣ—**

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ (ಅಶೋಚ್ಯಾನ್)
ಉಭೌತೌ ನವಿಜಾನೀತೋ ನಾಯಂ ಹಂತಿ ನ ಹನ್ಯತೆ ॥
ದೇಹೀ ನಿತ್ಯಂ ಅವಧ್ಯೋಯಂ ದೇಹೇ ಸರ್ವಸ್ಯ ಭಾರತ ॥

ಭೀಷ್ಮ ದ್ರೋಣರು ಹನನ ಮಾಡುವವರೂ ಅಲ್ಲ ಹತರಾಗುವವರೂ ಅಲ್ಲ. ಯಾರು ಅವರನ್ನು ಹನನಮಾಡುವವರು ಹತರಾಗುವವರು ಎಂದು ತಿಳಿದಿರುತ್ತಾರೋ ಅವರು ಯಥಾರ್ಥವನ್ನು ತಿಳಿದಿರುವುದಿಲ್ಲ. ಅವರ ತಿಳಿವಳಿಕೆ ವಿಪರೀತದ ತಿಳಿವಳಿಕೆ ಆಗಿರುತ್ತದೆ ಎಂದು ಹೇಳಿದ್ದಿ. ಆದ್ದರಿಂದ ರಣರಂಗದಲ್ಲಿ ಯುದ್ಧಸನ್ನದ್ಧರಾಗಿದ್ದ ಭೀಷ್ಮ ದ್ರೋಣರನ್ನು ಕಂಡು ನನ್ನಿಂದ ಅವರು ಹತರಾಗುತ್ತಾರೋ ಅವರೇ ನನ್ನನ್ನು ಹನನ ಮಾಡುತ್ತಾರೆಯೋ ಎಂದು ಜಯ ಅಪಜಯಗಳ ಯೋಚನೆಯಿಂದ ಭಯ ವ್ಯಥೆಗಳನ್ನು ಪ್ರದರ್ಶಿಸಿದ್ದು ನನ್ನ ಹೃದಯದಲ್ಲಿನ ವಿಮೂಢಭಾವ ವೆಂದೇ ನನಗೆ ನಿಶ್ಚಯವಾಯಿತು. ನಿನ್ನ ಉಗ್ರರೂಪದ ವಿಶ್ವದೇಹದಲ್ಲಿ ನಾನು ಕಂಡ ಭೀಷ್ಮ ದ್ರೋಣಾದಿಗಳ ಹನನ "ಮಯ್ಯೈವ ತೇನಿ ಹತಾ ಪೂರ್ವಮೇವ" ಎಂದು ನೀನು ನನಗೆ ಹೇಳಿದ್ದರೂ, ನಾನು ನನ ಚಕ್ಷುಸ್ಸಿನಿಂದಲೇ ಕಂಡಿದ್ದರೂ, ವಿಚಾರ ವಿಮರ್ಶೆಗಳಿಂದ ತಿಳಿದರೆ ಯಥಾರ್ಥದಲ್ಲಿ ಕೃತ್ಯವೇ ಸಂಭವಿಸಲಿಲ್ಲ ಎಂದೂ ನಿಶ್ಚಯವಾಯಿತು. ಹನನ ಕೃತ್ಯವೇ ಸಂಭವಿಸಲಿಲ್ಲ ಎಂದು ನಿಶ್ಚಯವಿರುವಾಗ ಸಂಭವಿಸದೇ ಇರುವ ಕೃತ್ಯಕ್ಕೆ ಕರ್ತನಾರು ಎಂಬ ಪ್ರಶ್ನೆಯೇ ಬರುವ ಹಾಗಿಲ್ಲ.

ಹೀಗಿರುವಾಗ "ಪ್ರಕೃತೇ ಕ್ರಿಯಮಾಣಾನಿ ಸರ್ವಶಃ" ಎಂದು ಕರ್ತೃತ್ವ ವನ್ನು ಯಾವ ಕೃತ್ಯಕ್ಕೆ ಪ್ರಕೃತಿಗೆ ಹೇಳಬೇಕು? ಆದ್ದರಿಂದ ಪ್ರಕೃತಿಗೂ ಕೂಡ ಕರ್ತೃತ್ವ ಸಂಭವವಿಲ್ಲವೆಂದೇ ನಿಶ್ಚಯವಾಯಿತು. ಆದ್ದರಿಂದ ನಾನು ನಿನ್ನ ಉಗ್ರರೂಪದ ವಿಶ್ವರೂಪ ದೇಹದಲ್ಲಿ ನೀನು ಕೊಟ್ಟ ದಿವ್ಯ ಚಕ್ಷುಸ್ಸಿನಿಂದ ಕಂಡ ಭೀಷ್ಮ ದ್ರೋಣಾದಿಗಳ ಹನನ ದೃಶ್ಯ, ಹನನ ಕೃತ್ಯ ನಡೆಯದೆಯೇ ಯಾರಿಗೂ ಹನನ ಕರ್ತೃತ್ವ ಇಲ್ಲದೆಯೇ ಯಾರೂ ಹತವಾಗ ದೆಯೇ ಇರುವ ನನ್ನ ಮನದಲ್ಲಿನ ವಿಮೂಢಭಾವ ಕಲ್ಪಿತವಾದ ಹನನ ದೃಶ್ಯ ಎಂದೂ,—ವಿಚಾರ ವಿಮರ್ಶೆಗಳಿಂದ 'ತತ್ವತಃ' ತೋರುವ 'ಮಿಥ್ಯಾದರ್ಶನವೆಂದೂ, ಭಯ ವ್ಯಥೆಗಳಿಗೆ ಅರ್ಹವಲ್ಲದ ವೇಷದಂತೆ ಗೋಚರವಾದ ದೃಶ್ಯ'ವೆಂದೂ ನಿಶ್ಚಯವಾಯಿತು.

## ೨. ದಿವ್ಯಚಕ್ಷು ಜ್ಞಾನಚಕ್ಷುಗಳ ಅರ್ಹತೆ

**ಜಗದ್ರೂಪದ ಮನುಷ್ಯ** (ವಾಸುದೇವಸ್ಸರ್ವಂ)—

ಪಶ್ಯಮೇ ಪಾರ್ಥ ರೂಪಾಣಿ ಶತಶೋಥ ಸಹಸ್ರಶಃ
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿಚ
ಪಶ್ಯಾದಿತ್ಯಾನ್ವಸೂನ್ ರುದ್ರಾನಶ್ವಿನೌ ಮರುತಸ್ತಥಾ
ಬಹೂನ್ಯ ದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ
ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಂ
ಮಮದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ।
ನತುಮಾಂ ಶಕ್ಯಸೇ ದ್ರಷ್ಟು ಮನೇನೈವಸ್ವಚಕ್ಷುಷಾ

**ಸಗುಣಬ್ರಹ್ಮ**—

ದಿವ್ಯಂದದಾಮಿ ತೇ ಚಕ್ಷುಃ ಪಶ್ಯಮೇಯೋಗಮೈಶ್ವರಂ॥

ನಾನು ನಿನ್ನ ಪರಮೇಶ್ವರ ರೂಪವನ್ನು ನೋಡಲು ಇಚ್ಛೆಪಟ್ಟು "ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ— ಯೋಗೇಶ್ವರನೇ ನಿನ್ನ ಅವ್ಯಯವಾದ ರೂಪವನ್ನು ದರ್ಶನಮಾಡಿಸು" ಎಂದು ಕೇಳಿಕೊಂಡೆ. "ಪಶ್ಯಮೇ ಯೋಗಮೈಶ್ವರಂ" ಎಂದು ಹೇಳಿ "ನನ್ನ ಅನಂತ ರೂಪಗಳನ್ನು ನೋಡು; ನಾನಾ ವಿಧವಾಗಿ ನಾನಾ ವರ್ಣ ವಾಗಿ ನಾನಾ ಕೃತಿಗಳಾಗಿರುವ ದಿವ್ಯ ರೂಪಗಳನ್ನು ನೋಡು. ಆದಿತ್ಯಾ

ನಾಮುಹಂವಿಷ್ಣು ಎಂದು ಹೇಳಲ್ಪಟ್ಟಿರುವ ಆದಿತ್ಯರನ್ನೂ ರುದ್ರಾಣಾಂ ಶಂಕರಶ್ಚಾಸ್ಮಿ ಎಂದು ಹೇಳಲ್ಪಟ್ಟಿರುವ ರುದ್ರರನ್ನೂ, ಇದರಂತೆಯೇ ಸಂಪೂರ್ಣವಾದ ಚರಾಚರ ಜಗತ್ತೆಲ್ಲವನ್ನೂ ಪರಮೇಶ್ವರನಾದ ನನ್ನಲ್ಲಿ ನೋಡು" ಎಂದು ಒಂದೊಂದೇ ತೋರಿಸಿ ನಿನ್ನ ಯೋಗವೈಶ್ವರ್ಯವನ್ನು ನೋಡಲು ನನಗೆ 'ದಿವ್ಯ ಚಕ್ಷು'ವನ್ನು ಕೊಟ್ಟೆ. ನಿನ್ನ ಪರಮೇಶ್ವರ ದೇಹದಲ್ಲಿ ನಾನು ಕಂಡ ನಿನ್ನ ಯೋಗಮಾಯಾ ರೂಪಗಳು ನನ್ನ ಮನದಲ್ಲಿನ ವಿಮೂಢಭಾವದ ಕಲ್ಪಿತ ದೃಶ್ಯಗಳೆಂದೂ, ವಿಚಾರ ವಿಮರ್ಶೆಗಳಿಂದ ಸ್ಪಷ್ಟವಾಗಿ ದ್ರಷ್ಟನಿಗೆ ತೋರುವ ಮಿಥ್ಯಾದೃಶ್ಯಗಳೆಂದೂ ವೇಷ ರೂಪಗಳೆಂದೂ ನಿಶ್ಚಯವಾಯಿತು. ನೀನು ಅವ್ಯಕ್ತನೂ ಅಚಿಂತ್ಯನೂ ಅವಿಭಕ್ತನೂ ಅವಿಕಾರಿಯೂ ಜಗತ್ತಿಗೆ ಪರನೂ, ತಮಸಃ ಪರನೂ ಆಗಿರುವುದರಿಂದ ನಿನ್ನ ಪರಮೇಶ್ವರ ಸ್ವರೂಪವನ್ನು, ನನಗೆ ಅಹಂ ತ್ವಾಂ ವಿಭಕ್ತಿಗಳಿಂದ ನನಗೆ ತೋರಿಸಲು ಅಶಕ್ಯವಾಗಿರುವುದರಿಂದ, ನನ್ನ ಮನದಲ್ಲಿನ ವಿಮೂಢಭಾವದಿಂದ ಕಲ್ಪಿತವಾದ ದೃಶ್ಯಗಳನ್ನೇ ನಿನ್ನ ಸಗುಣ ಬ್ರಹ್ಮಸ್ವರೂಪವೆಂದು ತಿಳಿಸಿ, ನಾನು ದಿವ್ಯ ಚಕ್ಷುಸ್ಸಿನಿಂದ ನಿನ್ನ ಅವಿಭಕ್ತ ಸಗುಣ ಸ್ವರೂಪವನ್ನು ಕಂಡು, ನಿನ್ನ ಅವ್ಯಕ್ತವಾದ ಅಚಿಂತ್ಯವಾದ ಪರಮೇಶ್ವರಸ್ವರೂಪವು ತಟಸ್ಥ ಲಕ್ಷಣದಿಂದ ಈ ಕಲ್ಪಿತ ದೃಶ್ಯಗಳಿಗೆ ಪರಂ ಆಗಿ ಅವಿಭಕ್ತನಾಗಿ ಅತೀತನಾಗಿ ಅವಿಕಾರಿಯಾಗಿ ಇರುವದನ್ನು ನನಗೆ ತಿಳಿಸಲು "ಪಶ್ಯಮೇ ಯೋಗವೈಶ್ವರಂ" ಎಂದು ನೀನು ನನಗೆ ಹೇಳಿರಬೇಕು. ಯೋಗಮಾಯಾಸಮಾವೃತ ದ್ರಷ್ಟೃವಾದ ನನಗೆ ನೀನು ದಿವ್ಯ ಚಕ್ಷುಸ್ಸನ್ನು ಅನುಗ್ರಹಮಾಡಿ ಕೊಟ್ಟದ್ದರಿಂದ ನೀನು ವಿಶ್ವರೂಪದ ಮನುಷ್ಯ, ಕೃತ್ಸ್ನಜಗತ್ತು ನಿನ್ನ ದೇಹ, ತ್ರಿಲೋಕಗಳಿಗೂ ನೀನು ಅಧಿಪತಿ ನೀನು ಈ ಲೋಕಗಳ ಸೃಷ್ಟಿ ಸ್ಥಿತಿ ಲಯಕರ್ತನೆಂದು ಮಾತ್ರ ತಿಳಿದು ಬಂದಿತೇ ವಿನಃ; (i) ನಿನ್ನಲ್ಲಿ ಕಂಡ ತ್ರಿಲೋಕಗಳೂ ಮತ್ತು ತ್ರಿಲೋಕಗಳ ಸೃಷ್ಟಿ ಸ್ಥಿತಿ ಲಯಗಳ ಕರ್ತೃತ್ವಗಳು ನನ್ನ ವಿಮೂಢ ಭಾವದ ಕಲ್ಪಿತದೃಶ್ಯಗಳು, "ನೀನು ತತ್ವತಃ ಈ ದೃಶ್ಯಗಳಿಗೆ ಅತೀತನು ಪರಂ ಆದ ಸಗುಣಬ್ರಹ್ಮನು, ವೇಷಧಾರಿ" ಎನ್ನುವ ರಹಸ್ಯವನ್ನು ದರ್ಶನ ಮಾಡಿಕೊಡಲು, 'ದಿವ್ಯ ಚಕ್ಷು'ವಿಗೆ ಅರ್ಹತೆ ಇಲ್ಲದೆ ಇದೆ. (ii) ನಿನ್ನ

ದೇಹದಂತೆ ಕಂಡ "ಕೃತ್ಸ್ನಜಗತ್ತು, ತತ್ವತಃ, ಪ್ರಿಯ ಅಪ್ರಿಯವಾದ ಸುಖ-ದುಃಖ, ಶೋಕ-ಮೋಹ, ಭಯ-ವ್ಯಥೆಗಳನ್ನುಂಟುಮಾಡಲು ಅರ್ಹತೆ ಇಲ್ಲದ ವೇಷರೂಪದ ಮಿಥ್ಯಾದೃಶ್ಯ"ವಾಗಿರುವ ರಹಸ್ಯವನ್ನು ದರ್ಶನಮಾಡಿಕೊಡಲು 'ದಿವ್ಯಚಕ್ಷು'ವಿಗೆ ಅರ್ಹತೆ ಇಲ್ಲದೆ ಇದೆ. ನಿನ್ನ ಪರಮ ರಹಸ್ಯದ ವಚನಗಳನ್ನು ಶ್ರದ್ಧೆಯಿಂದ ಗ್ರಹಿಸಿ, ವಿಚಾರ ವಿಮರ್ಶೆಮಾಡುವ 'ಜ್ಞಾನ ಚಕ್ಷು'ಸ್ಸಿಗೆ ಮಾತ್ರ ಅಂಥಾ ಅರ್ಹತೆ ಇದೆ. ಅದರಿಂದ ನೀನು ಗುಹ್ಯಾದ್ಗುಹ್ಯ–ಗುಹ್ಯಾದ್ಗುಹ್ಯತರ–ಗುಹ್ಯಾದ್ಗುಹ್ಯತಮವೆಂದು ಸ್ಪಷ್ಟವಾಗಿ ಹೇಳಿರುವ ಪರಮರಹಸ್ಯದ ವಚನಗಳನ್ನು ವಿಶ್ವಾಸದಿಂದ ಗ್ರಹಿಸಿ, ವಿಚಾರ ವಿಮರ್ಶೆಯಿಂದ ನೀನು ತತ್ವತಃ ಅವಿಭಕ್ತನಾದ ಏಕನಾದ ಪರಬ್ರಹ್ಮನು ಎಂದೂ, ಜ್ಯೋತಿಸ್ವರೂಪನೆಂದೂ, ತ್ರಿಲೋಕಗಳ ಸೃಷ್ಟಿ-ಸ್ಥಿತಿ-ಲಯ ಕರ್ತೃತ್ವಾದಿಗಳಿಲ್ಲದ ಅಸಂಸಾರಿ ಎಂದೂ, ಸೃಷ್ಟಿ-ಸ್ಥಿತಿ-ಲಯಗಳಿಂದ ಕೂಡಿದಂತೆ ತೋರುವ ಅಬ್ರಹ್ಮಭುವನಾದಿ ಲೋಕತ್ರಯಗಳು ದ್ರಷ್ಟೃವಿನ ವಿಮೂಢಭಾವ ಕಲ್ಪಿತ 'ವೇಷ' ರೂಪದ ದೃಶ್ಯಗಳೆಂದೂ, ವಿಚಾರ ವಿಮರ್ಶೆಗಳಿಂದ ಕೂಡಿದ 'ಜ್ಞಾನ ಚಕ್ಷು'ಷನಿಗೆ ಕಾಣುವ ಶೋಕ ಮೋಹ ಭಯಗಳನ್ನುಂಟುಮಾಡುವ ಅರ್ಹತೆ ಇಲ್ಲದ 'ಮಿಥ್ಯಾ'ಲೋಕಗಳೆಂದೂ, ಇದರಂತೆಯೇ ಯೋಗ ಮಾಯಾಸಮಾವೃತರಾದ ಸರ್ವಜೀವರ ಅನುಭವದಲ್ಲಿನ ಜಾಗ್ರತ್‌ಸ್ವಪ್ನ ಸುಷುಪ್ತಿಯಲ್ಲಿ ಸೃಷ್ಟಿಸ್ಥಿತಿಲಯಗಳಿಂದ ತೋರುತ್ತಿರುವ ಲೋಕಗಳೂ ದ್ರಷ್ಟ್ರನ ವಿಮೂಢಭಾವ ಕಲ್ಪಿತ 'ವೇಷ'ರೂಪದ ದೃಶ್ಯಗಳೆಂದೂ, ವಿಚಾರವಿಮರ್ಶಾಪರನಿಗೆ ತೋರುವ ಶೋಕ ಮೋಹ ಭಯ ವ್ಯಥೆಗಳನ್ನುಂಟುಮಾಡಲು ಅರ್ಹತೆಯಿಲ್ಲದ 'ಮಿಥ್ಯಾ'ಲೋಕಗಳೆಂದೂ ನಿಶ್ಚಯಿಸಿ ತಿಳಿದಿದ್ದೇನೆ.

## ವೇಷಧಾರಿಯ ವೇಷ

೩. ಅಜ್ಞಾನಾವೃತರಾಗಿ ವಿಮೂಢಭಾವದಿಂದ ಕೂಡಿ ಪ್ರಕೃತಿಸ್ಥರಾದ ದ್ರಷ್ಟೃಗಳ ಭೋಗಕ್ಕಾಗಿ ನೀನು ಧರಿಸಿರುವ ಅಬ್ರಹ್ಮಭುವನಾದಿ ಲೋಕತ್ರಯಗಳ ಸ್ವರೂಪವನ್ನು ನೀನು ಈ ರೀತಿ ಹೇಳಿದ್ದಿ.

**ವೇಷಧಾರಿ-ವೇಷ** (ವಾಸುದೇವಸ್ಸರ್ವಂ)—

ಮಯಾತತಂ ಇದಂ ಸರ್ವಂ ಜಗದವ್ಯಕ್ತ ಮೂರ್ತಿನಾ (ಅಜ್ಞಾನಮೂರ್ತಿ)
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷು ಅವಸ್ಥಿತಃ

**ಅಸಂಸಾರಿ ಸಗುಣಬ್ರಹ್ಮ** (ಜಗತಃಪರಃ ತಮಸಃಪರಃ)—

ನಚ ಮತ್ಸ್ಥಾನಿ ಭೂತಾನಿ ಪಶ್ಯಮೆಯೋಗಮೈಶ್ವರಂ ॥

ಅವ್ಯಕ್ತಮೂರ್ತಿಯಾದ ಅಜ್ಞಾನದಿಂದ ವ್ಯಕ್ತವಾಗಿರುವ, "ಇದಂ ಸರ್ವಂ" ರೂಪದ ಲೋಕತ್ರಯಗಳು ಅವಿಭಕ್ತನಾದ ಏಕನಾದ ನಿನ್ನಿಂದಲೇ ವ್ಯಾಪಿಸಲ್ಪಟ್ಟು ಸ್ಥಿತವಾಗಿವೆ. ಅಹಂತ್ವಾಂ ವಿಭಕ್ತಿಗಳಿಂದ ಕಾಣುವ ಜೀವೇಶ್ವರರೂ, ಭೋಗ ವಿಷಯಗಳಿಂದ ಕೂಡಿದ ಲೋಕ ತ್ರಯವೂ, ಅಜ್ಞಾನಾವೃತನಾದ ದ್ರಷ್ಟೃವಿನ ವಿಮೂಢಭಾವದಿಂದ ಕಲ್ಪಿತವಾಗಿ ವ್ಯಕ್ತವಾದ ಜಗತ್ತೂ, ಪರಬ್ರಹ್ಮನಾದ ನಿನ್ನಲ್ಲಿ ಪ್ರತಿಷ್ಠಿತವೇ ವಿನಃ ನೀನು ಅವುಗಳಲ್ಲಿ ಪ್ರತಿಷ್ಠಿತನಲ್ಲ. ಜೀವೇಶ್ವರರು ಲೋಕತ್ರಯಗಳು ನಿನ್ನಲ್ಲಿ ಪ್ರತಿಷ್ಠಿತ ಅಂದರೆ ತತ್ವತಃ ಪ್ರತಿಷ್ಠಿತವಲ್ಲ; ಪ್ರತಿಷ್ಠಿತವಾಗಿರು ವಂತೆ ಅಜ್ಞಾನಾವೃತನಾದ ದ್ರಷ್ಟೃವಿಗೆ ದರ್ಶಿತವಾಗಿರುವ ವೇಷರೂಪದ ಮಿಥ್ಯಾದೃಶ್ಯವೇ ವಿನಃ ಯಥಾರ್ಥವಾದ ಜೀವೇಶ್ವರರಿಂದ ಕೂಡಿದ ಭೋಗಲೋಕಗಳ ದೃಶ್ಯವಲ್ಲ; ಎಂದು ನಿನ್ನ ಐಶ್ವರ್ಯ ಯೋಗವನ್ನು ತಿಳಿಸಿರುವುದರಿಂದ, ನೀನು ತತ್ವತಃ ಅವಿಭಕ್ತನಾಗಿ ಪರಂ ಆಗಿ ಜೀವೇಶ್ವರ ರಿಂದ ಕೂಡಿದ ಲೋಕತ್ರಯಗಳ ವೇಷವನ್ನು, ಯೋಗ ಮಾಯಾ ಸಮಾವೃತರು ಕೋರುವ ವಿಷಯ ಭೋಗಗಳಿಗಾಗಿ ಧರಿಸಿರುವಂತೆ ತಿಳಿದಿರುತ್ತೇನೆ. ಯೋಗಮಾಯಾ ಸಮಾವೃತರಾದ ದ್ರಷ್ಟ್ರರಿಗೆ, ನೀನು ಧರಿಸಿರುವ ಜೀವೇಶ್ವರರಿಂದ ಕೂಡಿದ ಕೃತ್ಸ್ನ ಜಗತ್ತು ವೇಷರೂಪದ ತಮ್ಮ ವಿಮೂಢಭಾವದ ದೃಶ್ಯವೆಂದು ಕಾಣಬರದೆ (i) ಜೀವ ಜೀವಭೇದ ದಿಂದ ಕೂಡಿದ ಜೀವೇಶ್ವರ ಭೇದದಿಂದ ಕೂಡಿದ ಸಚರಾಚರ ಕೃತ್ಸ್ನ ಜಗತ್ತಿನಂತೆಯೂ (ii) ಮತ್ತು ಕೆಲವರಿಗೆ ಸೃಷ್ಟಿ ಸ್ಥಿತಿ ಲಯ ಕರ್ತನಾದ ವಿಶ್ವರೂಪದೇಹದ ಈಶ್ವರನಂತೆಯೂ (iii) ಯೋಗಮಾಯಾ ಸಮಾವೃತ ರಲ್ಲದ ವಿಚಾರವಿಮರ್ಶಪರರಾದ ದ್ರಷ್ಟ್ರರಿಗೆ, ಜೀವೇಶ್ವರರೂಪದ ಕೃತ್ಸ್ನ ಜಗದ್ರೂಪದ ವೇಷಧಾರಿ ಸಗುಣಬ್ರಹ್ಮನಂತೆಯೂ ವಿವಿಧವಾಗಿ ಕಾಣ

ಬರುತ್ತಿದ್ದಿ. ಅಸಂಸಾರಿಯಾದ ಪರಬ್ರಹ್ಮನು ಈ ವೇಷವನ್ನು ತಾನು ಧರಿಸಿ ಯೋಗಮಾಯಾ ಸಮಾವೃತರಿಗಾಗಿ ಸೃಷ್ಠಿ ಸ್ಥಿತಿ ಸಂಹಾರ ಕರ್ತೃತ್ವವನ್ನು ವಹಿಸಿ ತಾನು ನಾಟಕ ಪ್ರದರ್ಶನವನ್ನು ಮಾಡುತ್ತಾ ಧಾವಂತಪಡುತ್ತಿದಾನೆಯೇ? ಅಂದರೆ, ಧಾವಂತವನ್ನು ಪಡುತ್ತಿಲ್ಲ. ಅಜ್ಞಾನಆವೃತನಾದ ದ್ರಷ್ಟೃವಿಗೆ ಧಾವಂತಪಡುವವನಂತೆ ಕಾಣುತ್ತಿದಾನೆ. ಆದ್ದರಿಂದ ಸೃಷ್ಟಿ ಸ್ಥಿತಿ ಸಂಹಾರಕರ್ತನೆಂದು ತಿಳಿಯಲ್ಪಟ್ಟಿರುತ್ತಾನೆ. ಯೋಗಮಾಯಾ ಸಮಾವೃತನಾದ ದ್ರಷ್ಟ್ರನ ಜ್ಞಾನವನ್ನು ಅಪಹರಣಮಾಡಿರುವ ಅಜ್ಞಾನವೇ ಈ ರೀತಿಯ ವೇಷರೂಪದ ಮಿಥ್ಯಾ ದೃಶ್ಯವನ್ನು 'ಅಸಂಸಾರಿಯಾದ ಪರಬ್ರಹ್ಮ'ನಲ್ಲಿ ಕಲ್ಪನೆಮಾಡಿ ದ್ರಷ್ಟೃವನ್ನು ಮೋಹಿತನನ್ನಾಗಿ ಮಾಡಿದೆ.

## ಜೀವೇಶ್ವರ ಜಗತ್–ಆವರಣ

೪. ವೇಷಧಾರಿಯಂತೆ ಕಾಣುವ ನೀನು, ವೇಷಧಾರಣೆಗೆ ಪೂರ್ವದಲ್ಲೂ ವೇಷವಿಸರ್ಜನಾನಂತರವೂ ವೇಷದ ಸಂಪರ್ಕವೇ ಇಲ್ಲದೆ ಇರುವ ಜ್ಯೋತಿಸ್ವರೂಪನಾದ ಅಮೃತ ಸುಖಸ್ವರೂಪನು, ಅವಿಭಕ್ತರೂಪನು. ಅಜ್ಞಾನಕೃತವಾದ (ಪ್ರಕೃತಿ-ಮಾಯಾ-ಅಜ್ಞಾನ ಇವೆಲ್ಲಾ ಪರ್ಯಾಯ ಶಬ್ದಗಳು) ವ್ಯಕ್ತಾವ್ಯಕ್ತ ಸ್ವರೂಪದ ಜೀವೇಶ್ವರರಿಂದ ಕೂಡಿದ ಮಿಥ್ಯಾದೃಶ್ಯವಾದ ಕೃತ್ಸ್ನಜಗತ್ ವೇಷವನ್ನು ಧರಿಸಿರುವಂತೆ ಕಾಣುವಾಗಲೂ ವೇಷಸಂಪರ್ಕವಿಲ್ಲದೆ ಪರಂ ಆಗಿರುವ ಅವಿಭಕ್ತನಾದ ಏಕನಾದ ಅಮೃತ ಸ್ವರೂಪನು. ಆದರೆ ನೀನು ವೇಷಧಾರಿಯಾಗಿ ಯೋಗಮಾಯಾಸಮಾವೃತರಾದ ದ್ರಷ್ಟ್ರುರಿಗೆ ಸೃಷ್ಠಿ ಸ್ಥಿತಿ ಸಂಹಾರಕರ್ತನಂತೆ ತ್ರಿನೇತ್ರನಾದ ಈಶ್ವರನಂತೆ ಕಾಣಬರುವುದರಿಂದ ನಿನಗೆ 'ಅಸಂಸಾರಿ ಸಗುಣಬ್ರಹ್ಮ'ನೆಂದು ವೇಷಧಾರಣ ಕಾಲದಲ್ಲಿ "ಜ್ಞಾನಚಕ್ಷುಷನಾದ ದ್ರಷ್ಟೃವು" ಹೆಸರು ಇಟ್ಟಿರುತ್ತಾನೆ. ಯೋಗಮಾಯಾ ಸಮಾವೃತನಾಗಿ ಜ್ಞಾನಚಕ್ಷುಸ್ಸನ್ನು ಪಡೆಯದೆ ಇರುವ ದ್ರಷ್ಟ್ರುನಿಗೆ ವೇಷಧಾರಿಯಾದ ನೀನು, ಮಾಯಾಕೃತವಾದ ವೇಷದಿಂದ ಮುಚ್ಚಲ್ಪಟ್ಟು ಅಗೋಚರನಾಗಿರುವುದರಿಂದ ಆ ದ್ರಷ್ಟೃವು ಜೀವೇಶ್ವರರಿಂದಕೂಡಿದ ಕೃತ್ಸ್ನಜಗ

ತ್ತನ್ನು ಮಿಥ್ಯಾಸ್ವರೂಪದ ನಿನ್ನ ವೇಷವೆಂದು ತಿಳಿಯದೆ, "ಸತ್ಯವಾದ ಜಗತ್ತು, ವ್ಯವಹಾರ ಅರ್ಹವಾದ ಜಗತ್ತು" ಎಂದು ಶಪಥಮಾಡುತ್ತಾ ವ್ಯವಹಾರನಿರತನಾಗಿ ಯಂತ್ರಾರೂಢನಂತೆ ಧಾವಂತದಲ್ಲಿ ಸಿಕ್ಕಿಕೊಂಡಿರುತ್ತಾನೆ.

**ಅಸಂಸಾರಿ ಸಗುಣಬ್ರಹ್ಮ**—(ತಮಸಃ ಪರಃ = ಜಗತಃ ಪರಃ)

ನಾಹಂಪ್ರಕಾಶಸ್ಸರ್ವಸ್ಯ ಯೋಗಮಾಯಾ ಸಮಾವೃತಃ
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಂ ಅಜಮವ್ಯಯಂ ॥

**ಮೂಢಾತ್ಮ**—(ವಿಮೂಢಾತ್ಮ)

ಅವ್ಯಕ್ತಂವ್ಯಕ್ತಿಮಾಪನ್ನಂ ಮನ್ಯನ್ತೇ ಮಾಂ ಅಬುದ್ಧಯಃ (ಪ್ರಕೃತಿಸ್ಥಪುರುಷ)
ಪರಂಭಾವ ಮಜಾನಂತೋ ಮಮಾವ್ಯಯಮನುತ್ತಮಂ

**ಜ್ಞಾನಚಕ್ಷುಷನ ಜ್ಞೇಯಬ್ರಹ್ಮ ದರ್ಶನ**—(ಮತ್ತು ಪ್ರವೇಶ)

ಭಕ್ತ್ಯಾಮಾಂ ಅಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ವತಃ
ತತೋಽಮಾಂ ತತ್ವತೋ ಜ್ಞಾತ್ವಾ "ವಿಶತೇ ತದನಂತರಂ ॥"

'ಅಸಂಸಾರಿಯಾದ'—ಅವಿಭಕ್ತನಾದ ಸಗುಣಬ್ರಹ್ಮನಾದ ನೀನು ಧರಿಸಿರುವ 'ಸಂಸಾರಿಗಳ'—ವಿಭಕ್ತರಾದ ಜೀವೇಶ್ವರ ಜಗತ್‌ವೇಷವು, ನೀನು ಆಡುತ್ತಿರುವಂತೆ ತೋರುವ ನಾಟಕ ದೃಶ್ಯವೂ ಅಜ್ಞಾನಕೃತವಾದ ಮಿಥ್ಯಾದೃಶ್ಯಗಳಾಗಿದ್ದರೂ, ನೀನು ತತ್ವತಃ ಪರಂ ಆದ ನಿರ್ಗುಣಬ್ರಹ್ಮನಾಗಿ ಜ್ಯೋತಿಸ್ವರೂಪನಾಗಿರುವುದೂ, ನಿನ್ನ ಜಗತ್ ದೃಶ್ಯವು ತತ್ವತಃ ಮಿಥ್ಯಾದೃಶ್ಯವಾಗಿರುವುದೂ ಏಕರೀತಿಯಲ್ಲಿ ಸರ್ವದ್ರಷ್ಟ್ರರಿಗೂ ಗೋಚರವಾಗುತ್ತಿಲ್ಲ. ದಿವ್ಯಚಕ್ಷುಸ್ಸನ್ನು ಪಡೆಯದ ಮೂಢರು, ನಿನ್ನನ್ನು (ಸಗುಣಬ್ರಹ್ಮನೆಂದೂ ವಿಶ್ವರೂಪದ ಮನುಷ್ಯನೆಂದೂ ತಿಳಿಯದೆ) ನವದ್ವಾರಪುರದ ನಿತ್ಯ ಜಾತ ನಿತ್ಯ ಮೃತ ದೇಹಿಯಂತೆ ತಿಳಿಯುತ್ತಿದ್ದಾರೆ. ಜ್ಞಾನಚಕ್ಷುಷರಾದ ಭಕ್ತರು, ನಿನ್ನನ್ನು (ನವದ್ವಾರಪುರದ ಮನುಷ್ಯನೆಂದಾಗಲೀ ವಿಶ್ವರೂಪದ ಮನುಷ್ಯನೆಂದಾಗಲಿ ತಿಳಿಯದೆ) ವೇಷಧಾರಿಯಾದ ಪರಬ್ರಹ್ಮನೆಂದೂ ಜ್ಯೋತಿಸ್ವರೂಪನೆಂದೂ ನಿನ್ನ ಜೀವೇಶ್ವರ ಕೃತ್ಸ್ನ ಜಗದ್ರೂಪದ ವೇಷವು ತತ್ವತಃ ಮಿಥ್ಯಾದೃಶ್ಯ

ವೆಂದೂ ತಿಳಿದಿರುತ್ತಾರೆ. ಜಗತ್ತಿನ ಸ್ವರೂಪವನ್ನು ತತ್ವತಃ ತಿಳಿದಿರುವ ತತ್ವವಿತ್ತುಗಳು ಇಂದ್ರಿಯಗೋಚರದ ಜಗತ್ತನ್ನು ಅಭಾವವಿಲ್ಲದ ಸತ್ ರೂಪದ ವಸ್ತುವೆಂದು ನಿಶ್ಚಯಿಸಿರುವದಿಲ್ಲ. ಅಸತ್ತು ಅಲ್ಲದ ಭಾವವಸ್ತು ಎಂದೂ ನಿಶ್ಚಯಿಸಿರುವದಿಲ್ಲ. ಮತ್ತೆ ಯಾವ ರೀತಿ ನಿರೂಪಣೆಮಾಡಿ ತಿಳಿದಿರುತ್ತಾರೆ? ಎಂದರೆ "ನ ಸತ್ತನ್ನಾಸ ದುಚ್ಯತೇ" ಎಂದು ಹೇಳಿರುವಂತೆ ಅಭಾವವಿಲ್ಲದ ಸತ್‌ರೂಪದಿಂದಲೂ ಇಲ್ಲ, ಅಸತ್ತು ಅಲ್ಲದ ಭಾವವಸ್ತುವೂ ಅಲ್ಲ. "ನ ಕಶ್ಚಿತ್ ಕರ್ತು ಮರ್ಹತಿ" ಎಂದು ಹೇಳಿರುವಂತೆ ವ್ಯವಹಾರ ಅರ್ಹತೆ ಇಲ್ಲದ ಅಜ್ಞಾನಕಲ್ಪಿತ ಮಿಥ್ಯಾದೃಶ್ಯ ಎಂದು ನಿರೂಪಣೆಮಾಡಿ ತಿಳಿದಿರುತ್ತಾರೆ.

ಸ್ವರ್ಗ ವೈಕುಂಠ ಕೈಲಾಸ ಬ್ರಹ್ಮಲೋಕಗಳೂ ಕೂಡ ಅಜ್ಞಾನ ಕಲ್ಪಿತ ಮಿಥ್ಯಾದೃಶ್ಯಗಳೇ ಆಗಿರುವುದರಿಂದ, ತತ್ವದರ್ಶಿಯು ಸಂಸಾರಿಗಳಂತೆ ಈ ಲೋಕಗಳ ಭೋಗಸುಖಕ್ಕಾಗಿ ಧಾವಂತಪಡುವುದಿಲ್ಲ. ಅವನು ಇಚ್ಛಿಸುವ ಗಮ್ಯಸ್ಥಾನ ಯಾವುದೆಂದರೆ ಜ್ಯೋತಿಸ್ವರೂಪದ ಅಮೃತಸುಖ ಸ್ವರೂಪದ ಅಸಂಸಾರಿಯಾದ ನಿನ್ನ ಪರಮಪದ– ಅದ್ವಿತೀಯದ ನಿರ್ಗುಣಬ್ರಹ್ಮಸ್ಥಾನ. ಈ ರೀತಿ ಇರುವ ಅವರ ದರ್ಶನ ಅನುಭವಗಳ ವ್ಯತ್ಯಾಸಕ್ಕೆ ಅವರ ಚಕ್ಷುಗಳಲ್ಲಿನ ದೋಷಗಳ ವ್ಯತ್ಯಾಸವೇ ಕಾರಣವೆಂದು ನಿಶ್ಚಯಿಸಿ ತಿಳಿದಿರುತ್ತೇನೆ. (ದೋಷ = ಅಜ್ಞಾನ, ಕಲ್ಮಷ, ಕಶ್ಮಲ.)

ವಿಮೂಢಾನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ

ಜಗತ್ತು ಪರಬ್ರಹ್ಮಸ್ವರೂಪಿಣಿ ಎನ್ನುವದನ್ನು ವಿಮೂಢನು ತಿಳಿದಿರುವದಿಲ್ಲ. ಜ್ಞಾನಚಕ್ಷುಷನು ತಿಳಿದಿರುತ್ತಾನೆ.

# ಜಗಜ್ಜನನಿಯಾದ ಯೋಗಮಾಯೆಯ ಜೀವ-ಈಶ್ವರ ರೂಪ



**ಬಲದಿಂದ ಎಡಕ್ಕೆ :**—(೧) ಅವ್ಯಕ್ತಮೂರ್ತಿ, ಅಜ್ಞಾನವೆಂಬ ಹೆಸರಿನ ಜಗಜ್ಜನನಿ, ಯೋಗಮಾಯಾ, (೨) ಯೋಗಮಾಯಾ ಸಮಾವೃತನಾದ ವ್ಯಷ್ಟಿರೂಪದ ಅಮೃತಪುತ್ರ. ದೃಷ್ಟ್ಯವಾದ ಜೀವ, (೩) ದೈವೀ-ಮಮ ಮಾಯಾ-ಮಮ ಯೋನಿ ಎಂದು ಹೇಳಲು ಅರ್ಹತೆ ಇರುವ ಸೃಷ್ಟಿ ಸ್ಥಿತಿ ಲಯಕರ್ತನಾದ ಸಮಷ್ಟಿರೂಪನಾದ ಬ್ರಹ್ಮ ವಿಷ್ಣು ರುದ್ರ ರೂಪದ ತ್ರಿಣೇತ್ರನಾದ ದ್ರಷ್ಟಾ. ಸರ್ವತ್ರ ಸಮವಸ್ಥಿತ ಈಶ್ವರ. ಸಂಸಾರಿ ಜಗತ್ಪತಿ.

**ವಿಶ್ವರೂಪ :**—ಆದಿತ್ಯ-ವಸು-ರುದ್ರ ಇತ್ಯಾದಿ ವಿಭಕ್ತಿ ದರ್ಶನದಿಂದಿರುವ ಅನೇಕ ದೃಷ್ಟ್ಯಗಳಿಂದ ಕೂಡಿ ಸಚರಾಚರ ರೂಪದ ಜಗತ್ತಿನ ಜಗಜ್ಜನನಿಯ ವೇಷ. ಮಿಥ್ಯವಾದ ಸತ್ಯದಂತೆ ಕಾಣುವ 'ಪ್ರಕೃತಿಯ ವೇಷ'.

**ತ್ರಿಗುಣಗಳು :**—ಪ್ರಕೃತಿಸಂಭವಗಳಾದ ಸತ್ವರಜಸ್ತಮೋ ಗುಣಗಳು.

**ಸಗುಣಬ್ರಹ್ಮ :**—ವೇಷಧಾರಣೆಮಾಡಿ ಪಶ್ಯಾದಿತ್ಯಾನ್ ವಸೂನ್ ರುದ್ರಾನ್ ; ಎಂದು ಅನೇಕ ದೃಷ್ಟ್ಯಗಳನ್ನು ತೋರಿಸಿ ಆದಿತ್ಯಾನಾಮಹಂ ವಿಷ್ಣುಃ ರುದ್ರಾಣಾಂ ಶಂಕರಶ್ಚಾಸ್ಮಿ ಎಂದು ಹೇಳಿರುವ ಅವಿಭಕ್ತನಾದ, ಏಕನಾದ, ವೇಷ ಲೇಪವಿಲ್ಲದೆ ವೇಷವನ್ನು ಧರಿಸಿರುವಂತೆ ಸಹಸ್ರಾಕ್ಷನಂತೆ ಕಾಣುವ 'ದ್ರಷ್ಟ್ಯ'. ಅಸಂಸಾರಿ—ಜ್ಞೇಯಬ್ರಹ್ಮ ಜಗತ್ಪರಃ

**ನಿರ್ಗುಣಬ್ರಹ್ಮ :**—ವೇಷಧಾರಣೆಗೆ ಪೂರ್ವದಲ್ಲಿ, ವೇಷ ಕಾಲದಲ್ಲಿ, ವೇಷ ವಿಸರ್ಜನಾನಂತರ ಸರ್ವಕಾಲದಲ್ಲೂ ಸರ್ವಾತೀತನಾಗಿ ಯಾವ ಲೇಪವೂ ಇಲ್ಲದೆ ಅವ್ಯಕ್ತನಾಗಿ ಅಚಿಂತ್ಯನಾಗಿ ಅವಿಕಾರಿಯಾಗಿ ಪರಂಬ್ರಹ್ಮ ಪುರುಷೋತ್ತಮನು ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಪುಂಡರೀಕಾಕ್ಷನಾದ ಅವಿಭಕ್ತನಾದ ಏಕನಾದ 'ದ್ರಷ್ಟಾ'. ಜ್ಞೇಯ ಪರಂಜ್ಯೋತಿ. ಜೀವನ ಗಮ್ಯಸ್ಥಾನ=ಪರಬ್ರಹ್ಮ. ಅಸಂಸಾರಿ—ಜ್ಞೇಯಬ್ರಹ್ಮ

**ಸೂಚನೆ :**—ಸತ್+ಚಿತ್+ಆನಂದ ಲಕ್ಷಣಗಳು ಪರಬ್ರಹ್ಮನ ಸ್ವರೂಪ ಲಕ್ಷಣಗಳು. ಸತ್ವ+ರಜಸ್ಸು+ತಮಸ್ಸಿನ ಲಕ್ಷಣಗಳು ಪ್ರಕೃತಿಯ ಸ್ವರೂಪ ಲಕ್ಷಣಗಳು. ಪ್ರಕೃತಿಯು ಮತ್ತು ತ್ರಿಗುಣಗಳ ಲೇಪವಿಲ್ಲದೆ ನಿರ್ಲಿಪ್ತನಾಗಿರುವ ಪರಬ್ರಹ್ಮನನ್ನು ವೇದಗಳು 'ಅಸಂಸಾರಿ—ನಿರ್ಗುಣ ಬ್ರಹ್ಮ' ಎಂದು ಹೇಳಿ ಸತ್+ಚಿತ್+ಆನಂದ ಸ್ವರೂಪನೆಂದು ಸಾರುತ್ತಿವೆ.

# ತೃತೀಯ ಪ್ರಕರಣ

## ಜಗತ್ತಿನ ಜೀವ ಈಶ್ವರ ವಿಭಕ್ತಿಗಳ ವಿಮರ್ಶೆ

೧. **ಅರ್ಜುನ.**—ನೀನು ಯೋಗಮಾಯಾ ದೃಶ್ಯವಾದ ಜೀವೇಶ್ವರ ರೂಪದ ಕೃತ್ಸ್ನಜಗತ್ತಿನ ವೇಷಧಾರಿಯೆಂದು "ಪಶ್ಯಮೇ ಯೋಗ ಮೈಶ್ವರಂ" ಎಂದು ತಿಳಿಸಿ ನಿನ್ನ ವೇಷಧಾರಣೆಯ ಸ್ವರೂಪವನ್ನೂ ನಿನ್ನ ಯಥಾರ್ಥ ಸ್ವರೂಪವನ್ನೂ

> ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರ ಗೋಮಹಾನ್ (ನಲಿಪ್ಯತೇ)
> ತಥಾ ಸರ್ವಾಣಿ ಭೂತಾನಿ ಮತ್ಸ್ಥಾನಿತ್ಯುಪಧಾರಯ ॥

ಎಂದು ಮಹಾಕಾಶ ಸ್ಥಿತ ಮಹಾವಾಯು ದೃಷ್ಟಾಂತದಿಂದ ಹೇಳಿದ್ದಿ. ಈ ದೃಷ್ಟಾಂತದಿಂದ ದಾರ್ಷ್ಟಾಂತವನ್ನು ದ್ರಷ್ಟೃವು ತಿಳಿಯಬೇಕಾದರೆ ಮಹಾಕಾಶವನ್ನು ಪರಬ್ರಹ್ಮನಾದ ನಿನಗೂ ಮಹಾವಾಯುವನ್ನು ನಿನ್ನ ಯೋಗೈಶ್ವರ್ಯದ ಜಗದ್ದೃಶ್ಯಕ್ಕೂ ಅನ್ವಯಿಸಿ ವಿಮರ್ಶೆ ವಿಚಾರಗಳಿಂದ ತಿಳಿಯುವುದು ಅತ್ಯವಶ್ಯಕ. (ಮಹಾಕಾಶ = ನಿರ್ಲಿಪ್ತವಾದ ಆಕಾಶ).

## ಘಟಾಕಾಶ ಮಹಾಕಾಶದ ದೃಷ್ಟಾಂತ

೨. ಮಹಾಕಾಶವು ಸರ್ವದೃಶ್ಯ ರೂಪಗಳನ್ನೂ ಧರಿಸಿ ಸರ್ವರೂಪ ಗಳಲ್ಲೂ ಸ್ಥಿತವಾಗಿರುವಂತೆ ಕಂಡರೂ ಸರ್ವಾತೀತವಾಗಿ ಅವ್ಯಕ್ತರೂಪ ದಿಂದಲೇ ನಿರ್ಲಿಪ್ತವಾಗಿ ನಿರ್ವಿಕಾರವಾಗಿರುತ್ತದೆ. ಮಹಾಕಾಶಸ್ಥಿತ ವಾದ ವಾಯುವು ವ್ಯಕ್ತಾವ್ಯಕ್ತ ಚಲನ ಅಚಲನಗಳಿಂದ ಕೂಡಿ ವಿಕಾರಿಯಾಗಿರುತ್ತದೆ. ವಾಯುವಿನ ಅಂಶದಿಂದ ಸೃಷ್ಟಿಯಾಗಿರುವ ಘಟಗಳು ಅನೇಕ ವರ್ಣಗಳಿಂದಲೂ ಅನೇಕ ಆಕೃತಿಗಳಿಂದಲೂ ಕೂಡಿರುವುದರಿಂದ, ಅವಿಭಕ್ತವಾದ ಏಕವಾದ ಆಕಾಶವು ಅನೇಕ ಆಕಾಶಗಳಂತೆಯೂ, ಆಕಾಶಸ್ಥಿತವಾದ ವಾಯುವು ಅನೇಕ ವಾಯು ಗಳಂತೆಯೂ ವಿಭಕ್ತಿಗಳಿಂದ ತೋರುತ್ತಿವೆ. ವಿಭಕ್ತಿಗಳಿಂದ ತೋರುವ ಆಕಾಶವನ್ನು ಚತುರ್ವಿಧವಾಗಿ ವಿಂಗಡಿಸಬಹುದು. (i) ಘಟೋ ತ್ಪತ್ತಿಯ ಪೂರ್ವದಲ್ಲಿನ ಘಟನಾಶದನಂತರ ಶೇಷಿಯಾಗಿ ನಿಲ್ಲುವ

'ಮಹಾಕಾಶ' (ii) ಸರ್ವಘಟಗಳನ್ನು ಧರಿಸಿರುವಂತೆಯೂ ವ್ಯಾಪಿಸಿರುವಂತೆಯೂ ವಿಭಕ್ತಿಗಳಿಂದ ಕಂಡರೂ ತತ್ವತಃ 'ಪರಂ ಆಗಿ ನಿರ್ಲಿಪ್ತವಾಗಿರುವ ಅವಿಭಕ್ತವಾದ ಸರ್ವಗತ ಆಕಾಶ' (iii) ಸರ್ವಘಟಗಳನ್ನು ಧರಿಸಿರುವ ವ್ಯಾಪಿಸಿರುವ ವಿಚಾರ ವಿಮರ್ಶೆಗಳಿಲ್ಲದ ಅಜ್ಞಾನಾವೃತ ದ್ರಷ್ಟೃಗಳಿಗೆ ವ್ಯಷ್ಟಿಸಮಷ್ಟಿ ವಿಭಕ್ತಿಗಳಿಂದ ಕಾಣುವ ಸರ್ವಗತ ಸರ್ವಸ್ಥಿತ ಆಕಾಶ (iv) ವಿಭಕ್ತರೂಪದಿಂದ ವ್ಯವಹಾರದಲ್ಲಿರುವ 'ಘಟಾಕಾಶ'. ಈ ರೀತಿ ಚತುರ್ವಿಧ ರೂಪಗಳಿಂದ ಕಾಣುವ ಮಹಾಕಾಶವನ್ನು ತತ್ವತಃ ತಿಳಿಯಬೇಕಾಗಿದ್ದರೆ ಚತುರ್ವಿಧ ವಿಭಕ್ತಿಗಳಿಂದ ಕೂಡಿದ ಭಿನ್ನಭಿನ್ನ ಆಕಾಶಗಳು ಎಂದು ತಿಳಿದರೆ ಮಹಾಕಾಶವನ್ನು ತತ್ವತಃ ತಿಳಿದಂತಾಗಲಿಲ್ಲ. ಘಟಗಳ ವಿಶಿಷ್ಟವಾದ ಅವಿಭಕ್ತವಾದ ಏಕರೂಪದ ಆಕಾಶ ಎಂದು ತಿಳಿದರೆ ಮಹಾಕಾಶವನ್ನು ತತ್ವತಃ ತಿಳಿದಂತಾಗಲಿಲ್ಲ. ವ್ಯಕ್ತಾ ಅವ್ಯಕ್ತ ಸ್ವರೂಪದ ಘಟಗಳನ್ನು ಧರಿಸಲು ಶಕ್ತಿಯಿಂದ ಕೂಡಿದ ಶಕ್ತಿ ವಿಶಿಷ್ಟವಾದ ಅವಿಭಕ್ತವಾದ ಮಹಾಕಾಶ ಎಂದು ತಿಳಿದರೂ, ಮಹಾಕಾಶವನ್ನು ತತ್ವತಃ ತಿಳಿದಂತಾಗಲಿಲ್ಲ. ಮತ್ತೆ ಹೇಗೆ ತಿಳಿದರೆ ಮಹಾಕಾಶವನ್ನು ತತ್ವತಃ ತಿಳಿದಹಾಗೆ ಆಗುತ್ತದೆ? ಎಂದರೆ; ಸರ್ವಗತವಾದ ಸರ್ವಾತೀತವಾದ ಸರ್ವಕ್ಕೂ ಪರಂ ಆದ ನಿರ್ಲಿಪ್ತವಾದ ಅವ್ಯಕ್ತವಾದ ಅವಿಭಕ್ತವಾದ ಏಕವಾದ ಮಹಾಕಾಶವೇ, ವಿಭಕ್ತಿ ಪ್ರವಿಭಕ್ತಿಗಳಿಂದ ಕೂಡಿದ ಅನೇಕ ಆಕಾಶಗಳಂತೆ ಅಜ್ಞಾನ ಆವೃತನಾದ ದ್ರಷ್ಟೃವಿಗೆ ವಿಚಾರವಿಮರ್ಶೆಗಳಿಲ್ಲದಿದ್ದಾಗ ಕಾಣುತ್ತಿದೆಯೇ ವಿನಃ, ತತ್ವತಃ ತಮೋರೂಪದ ದೃಶ್ಯಗಳಿಗೆ ಪರಂ ಆದ ತಟಸ್ಥಲಕ್ಷಣದ ಮಹಾಕಾಶವೇ ಆಗಿರುತ್ತದೆ. ಆದ್ದರಿಂದ ಅವ್ಯಕ್ತವಾದ ಅಚಿಂತ್ಯವಾದ ಅವಿಕಾರಿಯಾದ ಮಹಾಕಾಶವನ್ನು, ವ್ಯಕ್ತ-ಅವ್ಯಕ್ತರೂಪದ ಚಲನ ಅಚಲನ ಲಕ್ಷಣಗಳಿಂದ ತೋರುವ ವಾಯುವಿಗೂ ವಿಭಕ್ತಿ ಪ್ರವಿಭಕ್ತಿ ರೂಪಗಳಿಂದ ತೋರುವ ಅನೇಕ ಘಟಾಕಾಶಗಳಿಗೂ ಅವಕಾಶವನ್ನು ಕೊಟ್ಟಿರುವಂತೆ ತೋರುವ ತಟಸ್ಥಲಕ್ಷಣದ ಮಹಾ ಆಕಾಶವೆಂದೇ ತಿಳಿಯಬೇಕಾಗಿದೆ.

ವಿಚಾರ ವಿಮರ್ಶೆಗಳನ್ನು ಮಾಡದೆ ಇರುವ ಅಜ್ಞಾನ ಆವೃತರಾದ ದ್ರಷ್ಟರು ಚತುರ್ವಿಧ ಭೇದಗಳಿಂದ ಕಾಣುವ ಆಕಾಶದ ದೃಶ್ಯಗಳು

ವಿಮೂಢಭಾವಕಲ್ಪಿತ ಮಿಥ್ಯಾದೃಶ್ಯಗಳೆನ್ನುವುದನ್ನೂ ಮಹಾಕಾಶಕ್ಕಿಂತ ಅನ್ಯವಾಗಿರದೆ ಅನನ್ಯವಾಗಿ ಏಕವೇ ಆಗಿರುವುದನ್ನೂ ತಿಳಿಯುತ್ತಿಲ್ಲವೆಂದೇ ಹೇಳಬೇಕಾಗಿದೆ. ದ್ರಷ್ಟೃವಿನ ವಿಮೂಢಭಾವದ ಕಾಲದಲ್ಲೂ ವಿಮೂಢ ಭಾವದ ನಾಶ ಅನಂತರವೂ ಸರ್ವಕಾಲದಲ್ಲೂ ಘಟಾಕಾಶವು ಮಹಾಕಾಶ ಕ್ಕಿಂತ ಅನ್ಯವಾಗಿರದೆ ಅನನ್ಯವಾಗಿಯೇ ಏಕವಾಗಿಯೇ ಇರುತ್ತದೆ. ಆದ್ದರಿಂದ ವಿಭಕ್ತರೂಪದ ವ್ಯವಹಾರದಲ್ಲಿರುವ ಘಟಾಕಾಶವನ್ನು ಶಾಶ್ವತ ವಾದ ಮಹಾಕಾಶಸ್ಥಾನವೆಂದೇ ನಿಶ್ಚಯಿಸಿ ತಿಳಿಯಬೇಕು.

## ದಾರ್ಷ್ಟಾಂತದ ಜೀವ–ಪರಬ್ರಹ್ಮ

೩. ಮಹಾಕಾಶದ ದೃಷ್ಟಾಂತವನ್ನು ಈ ರೀತಿ ವಿಚಾರವಿಮರ್ಶ ಗಳಿಂದ ತಿಳಿಯಬೇಕು:—

(i) ದೃಷ್ಟಾಂತದಲ್ಲಿನ ಘಟಗಳನ್ನು ದಾರ್ಷ್ಟಾಂತದಲ್ಲಿ ವಿಭಕ್ತಿಗಳಿಂದ ಕಾಣುವ ಅಹಂಕಾರ ಮತ್ತು ನವದ್ವಾರಪುರದ ದೇಹಗಳಿಗೂ, ಘಟಸ್ಥಿತವಾದ ವಾಯುಗಳನ್ನು ತ್ರೈಗುಣ್ಯ ಮಯದಮನಕ್ಕೂ, ಘಟಸ್ಥಿತ ಘಟಾಕಾಶವನ್ನು ಯೋಗಮಾಯಾ ಸಮಾವೃತನಾಗಿ ದ್ರಷ್ಟೃವಾದ ಅಧ್ಯಾತ್ಮನಾದ ಜೀವನಿಗೂ ಅನ್ವಯಿಸಬೇಕಾಗುತ್ತದೆ. ಅಧ್ಯಾತ್ಮನಿಗೂ ಜೀವನಿಗೂ ಇರುವ ವ್ಯತ್ಯಾಸವೇನೆಂದರೆ ಘಟದ ಸಂಯೋಗದಿಂದಿರುವ ಘಟಾಕಾಶದಂತೆ ಅಹಂಕಾರ ಮತ್ತು ದೇಹದ ಸಂಯೋಗವನ್ನು ಹೊಂದಿ, ಅಹಂ ಎಂದೂ ಅಹಂದೇಹಿ ಎಂದೂ ವಿಪರೀತ ದರ್ಶನದಿಂದ ಇರುವಾಗ "ಜೀವ"ನೆಂದು ಹೆಸರು. ದೇಹ ಮನ ಬುದ್ಧಿ ಅಹಂಕಾರಗಳ ಸಂಯೋಗವನ್ನು ಹೊಂದದೆ ತತ್ವತಃ ಪರಂ ಆಗಿರುವುದನ್ನು ತಿಳಿದು ವಿಪರೀತ ದರ್ಶನವಿಲ್ಲದ ಕಾಲದಲ್ಲಿ 'ಅಧ್ಯಾತ್ಮ' ಎಂದು ಹೆಸರು. ಈ ವ್ಯತ್ಯಾಸ ವನ್ನು ಜೀವ–ಸಂಸಾರಿ ಅಧ್ಯಾತ್ಮ–ಅಸಂಸಾರಿ ಎಂದು ತಿಳಿಯ ಬಹುದು. ಆಕಾಶವು ಘಟವನ್ನು ಪ್ರವೇಶಿಸಿ ಘಟದ ಬಂಧನಕ್ಕೆ ಸಿಕ್ಕಿರುವಂತೆ, ಜೀವನು ಅಹಂಕಾರವನ್ನು, ದೇಹವನ್ನು ಪ್ರವೇಶಿಸಿ ಬಂಧನಕ್ಕೆ ಸಿಕ್ಕಿರುತ್ತಾನೆ.

(ii) ಇದರಂತೆಯೇ ದೃಷ್ಟಾಂತದಲ್ಲಿನ ಸರ್ವಗತವಾದ ಸರ್ವಘಟಗಳನ್ನೂ ಧರಿಸಿರುವ ಸರ್ವಘಟಗಳ ಪ್ರಭವಕ್ಕೂ ಸ್ಥಿತಿಗೂ ಪ್ರಲಯಕ್ಕೂ ಸ್ಥಾನವಾಗಿರುವ ಸರ್ವಾಕಾಶವು ದಾಷ್ಟಾರ್ಂತ್ಯದಲ್ಲಿ ವ್ಯಷ್ಟಿ ಸಮಷ್ಟಿ ವಿಭಕ್ತಿಗಳಿಂದ ಕಾಣುವ ಸರ್ವತ್ರ ಸಮವಸ್ಥಿತನಾದ, ಜಗತ್ತಿನ ಸೃಷ್ಟಿ ಸ್ಥಿತಿ ಪ್ರಲಯಗಳಿಗೆ ಕರ್ತೃವಾದ, ಜಗತ್ಪತಿಯಾಗಿ ಸಂಸಾರಿಯಾದ, ಪ್ರಕೃತಿ ಮಾಯೆಗಳನ್ನು ತನ್ನ ಸ್ವತ್ತು ಎಂದು ಸ್ವಾಂ ಪ್ರಕೃತಿ ಮಮಮಾಯಾ ಮಮಯೋನಿ ಎಂದು ಹೇಳಲು ಅರ್ಹತೆ ಇರುವ ಈಶ್ವರನಿಗೂ–ವಿಷ್ಣುವಿಗೂ–ಬ್ರಹ್ಮನಿಗೂ ಅನ್ವಯವಾಗುತ್ತದೆ. ಪ್ರಕೃತಿ ಮಾಯೆಗಳನ್ನು ನನ್ನ ಸ್ವತ್ತು ಸ್ವಾಂ ಪ್ರಕೃತಿ ಮಮಮಾಯಾ ಮಮಯೋನಿ ಎಂದು ತನ್ನ ಈಶತ್ವವನ್ನು ಪ್ರದರ್ಶಿಸುವ ಪುರುಷನಾದ್ದರಿಂದ 'ಈಶ್ವರ'ನೆಂದೂ, ಮಯಾತತಂ ಇದಂ ಸರ್ವಂ ಎಂದು ಹೇಳಿರುವಂತೆ ಸರ್ವಗತತ್ವವನ್ನು ಪ್ರದರ್ಶಿಸುವ ಪುರುಷನಾದ್ದರಿಂದ 'ವಿಷ್ಣು' ಎಂದೂ ಅಹಂ ಪ್ರಭವಃ ಎಂದು ಸೃಷ್ಟಿಕರ್ತೃತ್ವವನ್ನು ಪ್ರದರ್ಶಿಸುವುದರಿಂದ 'ಬ್ರಹ್ಮ'ನೆಂದೂ ಏಕಪುರುಷನಿಗೆ ಇರುವ ಮೂರು ಹೆಸರುಗಳು. ಪ್ರಕೃತಿಮಾಯೆಗಳನ್ನು ವಶದಲ್ಲಿಟ್ಟುಕೊಂಡು ಪ್ರಕೃತಿ ಮಾಯೆಗಳಿಗೆ ಯಜಮಾನರಂತೆ ವರ್ತಿಸುವ ಸಂಸಾರಿಗಳು ಅನೇಕರಿದ್ದರೂ ಪ್ರಕೃತಿ ಮಾಯೆಗಳನ್ನು ನನ್ನ ಸ್ವತ್ತು "ಸ್ವಾಂ ಪ್ರಕೃತಿ, ಮಮ ಮಾಯಾ, ಮಮಯೋನಿ ದೈವೀ" ಎಂದು ಹೇಳುವ ಪುರುಷರು ಅನೇಕರಿಲ್ಲ. ಸಮಷ್ಟಿ ವಿಭಕ್ತಿಯಿಂದ ಇರುವ ಸಂಸಾರಿಯಾದ "ತ್ರಿನೇತ್ರನಾದ ಜಗದೀಶ್ವರನೊಬ್ಬನೇ" ಆ ರೀತಿ ಹೇಳಲು ಅರ್ಹನು. (ಜೀವ ಈಶ್ವರ ದೈವೀಸ್ವರೂಪವನ್ನು ಪ್ರಕರಣದ ಆದಿಯಲ್ಲಿರುವ ಚಿತ್ರಕ್ಕೆ ಅನ್ವಯಿಸಿ ಪ್ರಕೃತಿಸ್ಥರಾದ ಸಂಸಾರಿಗಳೆಂದು ಗ್ರಹಿಸಬೇಕು. ಜೀವ ವ್ಯಷ್ಟಿಪುರುಷ. ಈಶ್ವರ ಸಮಷ್ಟಿಪುರುಷ ಅವಿಭಕ್ತನಾದ ಪರಬ್ರಹ್ಮನನ್ನು ವ್ಯಷ್ಟಿ ಸಮಷ್ಟಿ ವಿಭಕ್ತಿಗಳಿಂದ ಪ್ರಕೃತಿಸ್ಥರಾದ ಜೀವ ಈಶ್ವರರನ್ನಾಗಿ ಕಾಣುವಂತೆ ಮಾಡಿರುವ 'ಜಗಜ್ಜನನಿ' ಪ್ರಕೃತಿ ಯೋಗಮಾಯಾ. ಸಗುಣಬ್ರಹ್ಮ ನಿರ್ಗುಣ

ಬ್ರಹ್ಮ ಸ್ವರೂಪಗಳು ಪ್ರಕೃತಿಸ್ಥವಲ್ಲದೆ ಪ್ರಕೃತಿ ಅತೀತವಾಗಿರುವುದರಿಂದ ಅಸಂಸಾರಿಗಳೆಂದು ಹೇಳಿದೆ.)

(iii) ಇದರಂತೆಯೇ ಸರ್ವಘಟಗಳನ್ನು ಧರಿಸಿ ವ್ಯಾಪಿಸಿರುವಂತೆಯೂ ವೇಷಧಾರಿಯಂತೆ ವಿಭಕ್ತಿಗಳಿಲ್ಲದ ವಿಭಕ್ತಿಗಳಿಂದ ಕಾಣುವ ತತ್ವತಃ ಪರಂ ಆಗಿ ನಿರ್ಲಿಪ್ತನಾಗಿ ಅವಿಭಕ್ತವಾದ ಸರ್ವಾತೀತವಾದ ಸರ್ವಾಕಾಶವು ಜೀವೇಶ್ವರ ಜಗತ್ತಿನ ವೇಷಧಾರಿಯಾದ "ಸಗುಣಬ್ರಹ್ಮ"ನಿಗೆ ಅನ್ವಯವಾಗುತ್ತದೆ. ಸಗುಣಬ್ರಹ್ಮ ಅಸಂಸಾರಿ; ಪರಂಜ್ಯೋತಿ ಸ್ವರೂಪನು. ಸರ್ವವನ್ನೂ ಪ್ರಕಾಶಿಸುವ, ಚಕ್ಷುಗಳ ಅಪೇಕ್ಷೆ ಇಲ್ಲದೆ ಸರ್ವವನ್ನೂ ತಿಳಿಯಲು ಸಾಮರ್ಥ್ಯದಿಂದ ಕೂಡಿರುವ, ಸರ್ವಾತೀತ ಪುರುಷನು.

"ಯಥಾ ಸರ್ವಗತಂ ಸೌಕ್ಷ್ಮ್ಯಾತ್ ಆಕಾಶಂ ನೋಪಲಿಪ್ಯತೇ
(ಲೇಪನ ಇಲ್ಲ)
ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾನೋಪಲಪ್ಯತೇ ॥ (ಅವಿಭಕ್ತ)
ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ 'ರವಿಃ'। (ಜ್ಯೋತಿ)
ಕ್ಷೇತ್ರಂ 'ಕ್ಷೇತ್ರೀ' ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥" (ಕ್ಷೇತ್ರಜ್ಞ)
(ಜ್ಞಾನದೀಪ–ಕ್ಷೇತ್ರಿಯು ಪ್ರಕಾಶಿಸುವುದು ಕ್ಷೇತ್ರದ ಮಿಥ್ಯಾಸ್ವರೂಪ)

ಎಂದು ಹೇಳಲ್ಪಟ್ಟಿರುವಂತೆ ಆಕಾಶ-ರವಿ ಸ್ವರೂಪದ ಉಪಮಾನಗಳಿಂದ ತಿಳಿಯಲ್ಪಡತಕ್ಕವನು.

(iv) ಇದರಂತೆಯೇ ಘಟೋತ್ಪತ್ತಿಯ ಪೂರ್ವದಲ್ಲಿನ ಘಟನಾಶಾನಂತರ ಶೇಷಿಯಾಗಿ ನಿಲ್ಲುವ ಅವಿಭಕ್ತವಾದ ಮಹಾಕಾಶವು, ಜೀವೇಶ್ವರ ಜಗತ್ತಿನ ವೇಷಧಾರಣೆಗೆ ಪೂರ್ವದಲ್ಲೂ ವೇಷವಿಸರ್ಜನಾನಂತರವೂ ಅಚಿಂತ್ಯನಾಗಿಯೂ ಅವ್ಯಕ್ತನಾಗಿಯೂ ಅವಿಕಾರಿಯಾಗಿಯೂ ವೇಷಗಳ ಲೇಪವೇ ಇಲ್ಲದೆ ದ್ರಷ್ಟೃವಾಗಿ ಶೇಷಿಯಾಗಿ ನಿಲ್ಲುವ ಪರಂಜ್ಯೋತಿಸ್ವರೂಪದ ಪರಂ ಬ್ರಹ್ಮನಿಗೂ ಅಂದರೆ "ನಿರ್ಗುಣಬ್ರಹ್ಮ"ನಿಗೂ ಅನ್ವಯವಾಗುತ್ತದೆ. ನಿರ್ಗುಣಬ್ರಹ್ಮ ಅಸಂಸಾರಿ, ಪರಂಜ್ಯೋತಿ ಅಮೃತಸ್ವರೂಪ.

೪. ಈ ರೀತಿ ದೃಷ್ಟಾಂತ ದಾರ್ಷ್ಟಾಂತಗಳ ವಿಚಾರ ವಿಮರ್ಶೆಗಳಿಂದ ತಿಳಿದುಬರುವುದೇನೆಂದರೆ, ಅವ್ಯಕ್ತನಾದ ಅಚಿಂತ್ಯನಾದ ನಿರ್ವಿಕಾರನಾದ ನಿತ್ಯನಾದ ಪರಬ್ರಹ್ಮನು ಜೀವೇಶ್ವರ ಜಗದ್ರೂಪಗಳಿಗಿಂತ ಪರಂ ಆದ ತಟಸ್ಥಲಕ್ಷಣದಿಂದ ಇರುವ ಪರಬ್ರಹ್ಮನು, ಅವಿಭಕ್ತನು, ಏಕನು ಎಂದೂ, 'ಅವಿಭಕ್ತನಾದ ಏಕನಾದ ಪರಬ್ರಹ್ಮನೇ ವಿಭಕ್ತಿಗಳಂತೆ ಜೀವ ಈಶ್ವರ ವಿಭಕ್ತಿಗಳಿಂದ ಕಾಣುತ್ತಿದಾನೆ' ಎಂದೂ, ಜೀವನು–ಅಧ್ಯಾತ್ಮನು ಪರಬ್ರಹ್ಮನಿಗಿಂತ ಅನ್ಯನಲ್ಲ ಅನನ್ಯನೆಂದೂ, ಮತ್ತು ದ್ರಷ್ಟೃವಾದ ಜೀವನು–ಅಧ್ಯಾತ್ಮನು ದ್ರಷ್ಟನಾದ ಪರಬ್ರಹ್ಮನಿಗಿಂತ ವಿಭಕ್ತಪುರುಷನಲ್ಲ ಅವಿಭಕ್ತನಾದ ಏಕನಾದ ವಿಭಕ್ತಮಿವಸ್ಥಿತ ಜ್ಞೇಯನಾದ ಪರಬ್ರಹ್ಮನೇ ಎಂದು ತಿಳಿದುಬರುತ್ತದೆ. ಈ ರೀತಿ ತಿಳಿದು ಬಂದಮೇಲೆ ದ್ರಷ್ಟನಾದ ಜೀವ–ಅಧ್ಯಾತ್ಮನಿಗೆ ಇರುವ ಜೀವ ಜೀವ ಭೇದಗಳೂ ಜೀವೇಶ್ವರ ಭೇದಗಳೂ, ಯೋಗಮಾಯಾ ಸಮಾವೃತವಾದ ಜೀವ–ಅಧ್ಯಾತ್ಮನು ವಿಮೂಢಭಾವದ ಕಲ್ಪಿತ ಭೇದಗಳೆಂದೂ, ಜೀವ–ಅಧ್ಯಾತ್ಮನಿಗೆ ಕಾಣುವ ಜೀವ–ಈಶ್ವರರ ಭೋಗಲೋಕಗಳು ವಿಮೂಢಭಾವದ ದೃಶ್ಯಗಳೆಂದೂ, ತತ್ವತಃ ಇವೆಲ್ಲಾ ಮಿಥ್ಯಾದರ್ಶನವೆಂದೂ ವೇಷರೂಪದ ದೃಶ್ಯಗಳೆಂದೂ, ದ್ರಷ್ಟೃವಾದ ಜೀವನು-ಅಧ್ಯಾತ್ಮನು ಪರಬ್ರಹ್ಮನಿಗಿಂತ ಅನನ್ಯನಾಗಿರ ವುದನ್ನೂ ಏಕಪುರುಷನೇ ಆಗಿರುವುದನ್ನೂ ತಿಳಿಯುತ್ತಿಲ್ಲವೆಂದೂ, ತಿಳಿದು ಬರುತ್ತದೆ.

## ಆವಾಹನೆಗೆ ಹೇಳಿರುವ ಜ್ಞೇಯನಾದ ಸಗುಣಬ್ರಹ್ಮ ನಿರೂಪಣೆ

೫. "ಅಹಂ ದೇಹಿ ಅಸ್ಮಿ" ಎಂದು ವಿಪರೀತ ಭಾವನೆಯಿಂದ ಅಹಂಕಾರ ಆಶ್ರಿತನಾಗಿ ನವದ್ವಾರಪುರ ದೇಹಸ್ಥಿತನಾದ ಜೀವನಿಗೆ ಇರುವ ವಿಪರೀತ ದರ್ಶನವನ್ನು ನಾಶಮಾಡುವತನಕ, "ಅಹಂ ಪರಂ ಬ್ರಹ್ಮ ಅಸ್ಮಿ" ಎಂಬ ತತ್ವತಃ ದರ್ಶನ ಬರಲು ಅವಕಾಶವಿಲ್ಲದಿರುವುದ ರಿಂದ, 'ಜೀವ–ಅಧ್ಯಾತ್ಮ–ಪರಬ್ರಹ್ಮರ ಅನನ್ಯತ್ವ ಏಕತ್ವ'ವನ್ನು ವಿಚಾರ ವಿಮರ್ಶೆಗಳಿಂದ ಅನುಷ್ಠಾನಮಾಡಿ ವಿಪರೀತ ದರ್ಶನವನ್ನು ನಾಶಮಾಡುವದು ಅತ್ಯವಶ್ಯಕವಾಗಿದೆ. ಆದ್ದರಿಂದ ಜೀವನು ಪ್ರಥಮತಃ

ತನ್ನ "ಅಹಂ" ಸ್ವರೂಪವನ್ನು ದೇಹಕ್ಕಿಂತ 'ಪರಂ ಆದ ಅಧ್ಯಾತ್ಮ' ನಾಗಿರುವುದನ್ನು ನಿಶ್ಚಯಿಸಿ ತಿಳಿದು, ಜೀವೇಶ್ವರ ರೂಪದ ಜಗತ್ತಿನ ವೇಷಧಾರಿಯಾದ ವೇಷಕ್ಕಿಂತ ಪರಂ ಆದ ತಟಸ್ಥಲಕ್ಷಣದ ಸಗುಣ ಬ್ರಹ್ಮನನ್ನು "ತ್ವಂ" ಎಂದು ನಿಶ್ಚಯಿಸಿ ತಿಳಿದು, ಗಾಯತ್ರಿಯನ್ನು ಆವಾಹನೆಮಾಡಿಕೊಂಡು ಅನುಷ್ಠಾನಮಾಡುವಂತೆಯೇ, 'ಸಗುಣ ಬ್ರಹ್ಮ'ನನ್ನು ಆವಾಹನೆಮಾಡಿಕೊಂಡು "ಅಹಂ" ರೂಪದ ಅಧ್ಯಾತ್ಮ ನಿಗೂ, "ತ್ವಂ" ರೂಪದಿಂದ ಆವಾಹನೆಮಾಡಿಕೊಂಡಿರುವ ಸಗುಣ ಬ್ರಹ್ಮನಿಗೂ, ಇರುವ ಅನನ್ಯತ್ವ-ಏಕತ್ವವನ್ನು ವಿಚಾರವಿಮರ್ಶೆಗಳಿಂದ ಅನುಷ್ಠಾನಮಾಡಬೇಕಾಗಿದೆ. ಅವಿಭಕ್ತನಾದ ಪರಬ್ರಹ್ಮನಿಂದ ವಿಭಕ್ತ ನಾಗಿ ದೂರಸ್ಥನಾಗಿರುವ ಜೀವನು ಪರಬ್ರಹ್ಮನ ಅನನ್ಯತ್ವವನ್ನೂ ಏಕತ್ವ ವನ್ನೂ ತಿಳಿಯದೇ ಇರುತ್ತಾನೆ. ವಿಭಕ್ತನಾಗಿ ದೂರಸ್ಥನಾಗಿರುವ ಜೀವನು ದೂರಸ್ಥನಂತಿರುವ ಪರಬ್ರಹ್ಮನ ತತ್ವತಃ ಇರುವ ಅನನ್ಯತ್ವ ವನ್ನೂ ಏಕತ್ವವನ್ನೂ ತಿಳಿಯಬೇಕಾಗಿರುವುದರಿಂದ ದೂರಸ್ಥನಂತಿರುವ ಪರಬ್ರಹ್ಮನನ್ನು ಆವಾಹನಪೂರ್ವಕವಾಗಿ ಅತ್ಯಂತ ಸಮೀಪಸ್ಥನನ್ನಾಗಿ ಮಾಡಿಕೊಂಡು ಅನನ್ಯತ್ವ ಏಕತ್ವವನ್ನು ತಿಳಿಯಬೇಕಾಗಿದೆ. ಆದ್ದರಿಂದ "ಆವಾಹನಾಪೂರ್ವಕವಾಗಿ ಅನುಷ್ಠಾನ ಅತ್ಯವಶ್ಯಕ."

**ಸಾಕ್ಷಾತ್ಪರಬ್ರಹ್ಮನಾದ ಪರಂಜ್ಯೋತಿ** (ಅಮೃತಸ್ವರೂಪ)—ಜ್ಞೇಯಬ್ರಹ್ಮ

> ಮಯ್ಯರ್ಪಿತ ಮನೋಬುದ್ಧಿ ರ್ಮಾಮೇವ ಐಷ್ಯಸಿ ಅಸಂಶಯಃ
> ಮಯ್ಯೇವಮನ ಆ ಧತ್ಸ್ವ ಮಯಿಬುದ್ಧಿಂ ನಿವೇಶಯ (ಪರಿಚಿಂತನ)
> ನಿವಸಿಷ್ಯಸಿ ಮಯ್ಯೇವ 'ಅತಊರ್ಧ್ವಂ' ನ ಸಂಶಯಃ ॥ ಪ್ರವೇಶ

ಅಧ್ಯಾತ್ಮನ ವಿಪರೀತ ದರ್ಶನವನ್ನು ನಾಶಮಾಡಲು ತನ್ನ ಅನನ್ಯತ್ವ ವನ್ನು ತಿಳಿಯಲು ಸರ್ವಾತೀತನಾದ ತಟಸ್ಥ ಲಕ್ಷಣದ ಸಗುಣಬ್ರಹ್ಮ ನನ್ನು ಆವಾಹನಪೂರ್ವಕ ವಿಚಾರ ವಿಮರ್ಶೆಗಳಿಗಾಗಿ ಹೇಳಿದ್ದರೂ, 'ಅಧ್ಯಾತ್ಮ'ನಿಗೆ ವೇಷಧಾರಿಯಾದ, ತ್ವಂ ರೂಪದಿಂದ ತಿಳಿಯಲ್ಪಡುವ, "ಸಗುಣಬ್ರಹ್ಮನನ್ನು ಪ್ರವೇಶಸ್ಥಾನವನ್ನಾಗಿ ಹೇಳಿಲ್ಲ." ಅಧ್ಯಾತ್ಮನು ತನ್ನ ವಿಮೂಢಭಾವದಿಂದ ನೀನು ಧರಿಸಿರುವ ಅಬ್ರಹ್ಮಭುವನಾದಿ ಅನೇಕ ಲೋಕಗಳನ್ನು ಅನಾದಿಕಾಲದಿಂದಲೂ ಪ್ರವೇಶಿಸುತ್ತಿದ್ದಾಗ್ಯೂ,

ಅಜ್ಞಾನ ಆವೃತನಾಗಿ ತಾನು ಧರಿಸಿರುವ ಜಾಗ್ರತ್ ಸ್ವಪ್ನ ಸುಷುಪ್ತಿ ಲೋಕತ್ರಯುಗಳನ್ನು ಅನೇಕ ಸಲ ಪ್ರವೇಶಿಸುತ್ತಿದ್ದಾಗ್ಯೂ, ಅಜ್ಞಾನ ಗಂತವ್ಯದ ಈ ಸ್ಥಾನಗಳು, ಅಧ್ಯಾತ್ಮನ ವಿಮೂಢಭಾವವನ್ನೂ ಅಧ್ಯಾತ್ಮನ–ಪರಬ್ರಹ್ಮನ ಏಕತ್ವದ ಆದರ್ಶನವನ್ನುಂಟುಮಾಡಿರುವ ಅಜ್ಞಾನವನ್ನೂ ಪುನರಾವರ್ತಿ ಇಲ್ಲದೆ ಭಸ್ಮಮಾಡಿ, ಪರಬ್ರಹ್ಮನ ಏಕತ್ವ ವನ್ನು ಶಾಶ್ವತವಾಗಿ ಉಂಟುಮಾಡಲು ಅರ್ಹತೆ ಇಲ್ಲದ ಸ್ಥಾನಗಳಾಗಿವೆ. 'ಅಬ್ರಹ್ಮಭುವನಾದಿ' ಲೋಕಗಳಿಗೂ, 'ಜಾಗ್ರತ್ ಸ್ವಪ್ನ ಸುಷುಪ್ತಿ' ಲೋಕತ್ರಯುಗಳಿಗೂ, ಪರಂ ಆದ ಅತೀತನಾದ ತ್ವಂ ವಿಭಕ್ತಿಯಿಂದ ತಿಳಿಯಲ್ಪಟ್ಟ, ಅಸಂಸಾರಿಯಾದ ಅವಿಭಕ್ತನಾದ ಸಗುಣಬ್ರಹ್ಮನನ್ನು ಆವಾಹನೆಮಾಡಿಕೊಂಡು ವಿಚಾರ ವಿಮರ್ಶೆಗಳನ್ನು ಮಾಡುವುದರಿಂದ ಬಂದ ಲಾಭವೇನೆಂದರೆ, ವಿಭಕ್ತನೆಂದು ತಿಳಿದಿದ್ದ ಅಧ್ಯಾತ್ಮನಿಗೆ ಇದ್ದ ನಿತ್ಯ ಜಾತತ್ವ ನಿತ್ಯ ಮೃತತ್ವದ ವಿಪರೀತ ದರ್ಶನಗಳು ನಾಶವಾಗಿ ಅವಿಭಕ್ತನಾದ ಸಗುಣಬ್ರಹ್ಮನ ಸಾಧರ್ಮ್ಯಗಳನ್ನು ಅಂದರೆ ಅನನ್ಯತ್ವ —ಅವಿಭಕ್ತತ್ವ—ಅಸಂಸಾರಿ ಧರ್ಮಗಳನ್ನು

"ಇದಂಜ್ಞಾನ ಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ । (ವೇಷಧಾರಿ)
ಸ ರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ॥" (ಸಾಧರ್ಮ್ಯ)

ಎಂದು ನೀನು ಹೇಳಿರುವಂತೆ, ಪಡೆಯುವದೇ ಲಾಭವಾಗಿರುತ್ತದೆ.

## ಪ್ರವೇಶಕ್ಕಾಗಿ ಹೇಳಿರುವ ಜ್ಞೇಯಸ್ಥಾನ ನಿರ್ಗುಣಬ್ರಹ್ಮ

೬. ವಿಭಕ್ತಜ್ಞಾನದ ಅಧ್ಯಾತ್ಮನು, ಅವಿಭಕ್ತನಾದ ಪರಬ್ರಹ್ಮನಾದ ನಿನ್ನನ್ನು, ಅವಿಭಕ್ತನೆಂದು ಏಕನು, ಅನನ್ಯನು ಎಂದು ತಿಳಿಯಲು ಪ್ರತಿಬಂಧಕವನ್ನುಂಟುಮಾಡಿ, ತ್ವಂ ವಿಭಕ್ತಿಯಿಂದ ತಿಳಿಯುವಂತೆ ಮಾಡಿರುವ ಏಕತ್ವ ಅದರ್ಶನದ ಮತ್ತು ಅನನ್ಯತ್ವ ಅದರ್ಶನದ ಅಜ್ಞಾನ ವನ್ನು ಪುನರಾವರ್ತಿ ಇಲ್ಲದಂತೆ ಭಸ್ಮಮಾಡುವ ಗಮ್ಯಸ್ಥಾನ ನಿನ್ನ "ಪರಮಪದ–ನಿರ್ಗುಣ ಬ್ರಹ್ಮಸ್ಥಾನ–ಪರಬ್ರಹ್ಮಸ್ಥಾನ" ವೆಂದು ನೀನು ತಿಳಿಸಿ, ಈ ಗಮ್ಯಸ್ಥಾನ ಪ್ರವೇಶವನ್ನು, ಅಧ್ಯಾತ್ಮನಿಗೂ ಜ್ಞೇಯನಾದ ಜ್ಯೋತಿಸ್ವರೂಪದ ಪರಬ್ರಹ್ಮನಿಗೂ (ಅಂದರೆ "ಅಹಂ, ತ್ವಾಂ" ಗಳಿಗೆ)

ತತ್ವತಃ ಇರುವ ಏಕತ್ವವನ್ನು ಅನನ್ಯತ್ವವನ್ನೂ ವಿಚಾರ ವಿಮರ್ಶೆಗಳಿಂದ ತಿಳಿದು ಘಟಾಕಾಶವು ಮಹಾಕಾಶವನ್ನು ಪ್ರವೇಶಿಸುವಂತೆ ಪ್ರವೇಶ ಮಾಡಬೇಕೆಂಬ ಗುಹ್ಯಾದ್ಗುಹ್ಯತಮ ರಹಸ್ಯವನ್ನು ಈ ರೀತಿ ಹೇಳಿದ್ದಿ.

**ಸಾಕ್ಷಾತ್ಪರಬ್ರಹ್ಮನಾದ ಪರಂಜ್ಯೋತಿ (ಅಮೃತಸ್ವರೂಪ–ಜ್ಞಾನಗಂತವ್ಯ)—**

> **ಭಕ್ತ್ಯಾಮಾಂ ಅಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ವತಃ ಜ್ಞೇಯಬ್ರಹ್ಮ**
> **ತತೋಮಾಂ ತತ್ವತೋಜ್ಞಾತ್ವಾ ವಿಶತೇ ತದನಂತರಂ ॥ (ಪ್ರವೇಶ)**

ಈ ರೀತಿ ಹೇಳಿರುವುದರಿಂದ ಅಧ್ಯಾತ್ಮನ ಮನ-ಬುದ್ಧಿಗಳು ಆವಾಹಿತ ನಾದ ವೇಷದಾರಿಯಾದ ತ್ವಂ ರೂಪದ ಸಗುಣಬ್ರಹ್ಮನನ್ನು 'ಅನನ್ಯನೆಂದು ತಿಳಿದು', ಅಲ್ಲೇನಿಲ್ಲದೆ "ಮಾಮೇಕಂ ಶರಣಂ ವ್ರಜ" ಎಂದು ಹೇಳಿರು ವಂತೆ 'ಜ್ಞೇಯನಾದ ಪರಬ್ರಹ್ಮನಾದ ಪರಂಜ್ಯೋತಿಯಾದ ನಿನ್ನನ್ನು ಪ್ರವೇಶಿಸಿ ಏಕತ್ವಮಾ ಸ್ಥಿತನಾಗಬೇಕು' ಎಂದು ನಿನ್ನ ಉಪದೇಶಕ್ಕೆ ಅರ್ಥವಾಯಿತು. ನೀನು ಅವಿಭಕ್ತನಾದ ಏಕನಾದ ಜ್ಞೇಯ ಪುರುಷ ನಾಗಿರುವುದರಿಂದ ನಿನ್ನನ್ನು "ತ್ವಂ" ಎಂದು ವಿಭಕ್ತಿಪೂರ್ವಕವಾಗಿ ತಿಳಿದರೆ ನಿನ್ನನ್ನು ತತ್ವತಃ ಪ್ರವೇಶಿಸಿ ಅವಿಭಕ್ತನಾದ ಏಕನಾದ ಜ್ಞೇಯ ಪುರುಷನೆಂದು ತಿಳಿದಂತಾಗುವುದಿಲ್ಲ. ಆದ್ದರಿಂದ ನಿನ್ನನ್ನು "ಅಹಂ ಪರಬ್ರಹ್ಮಅಸ್ಮಿ" ಎಂದು ದ್ರಷ್ಟೃವಾದ ಅಧ್ಯಾತ್ಮನು ತಿಳಿದರೆ, ಆಗ ನಿನ್ನನ್ನು ತತ್ವತಃ ಏಕ-ಅವಿಭಕ್ತ-ಜ್ಞೇಯ ಪುರುಷನು ಎಂದು ತಿಳಿದಂತಾಗುತ್ತದೆ. ಆದ್ದರಿಂದ ಅವಿಭಕ್ತನಾದ ಜ್ಞೇಯನಾದ ಸಾಕ್ಷಾ ತ್ಪರಬ್ರಹ್ಮನಾದ ನಿನ್ನನ್ನು ವಿಭಕ್ತಿಗಳಿಂದ ತಿಳಿಯದೆ ವಿಚಾರಪೂರ್ವಕ ವಾಗಿ ಏಕನೆಂದು ತಿಳಿಯುವದೇ ಏಕಭಕ್ತಿ ಎಂದೂ, "ಈ ಏಕಭಕ್ತಿಯೇ" ಏಕತ್ವ ಅದರ್ಶನರೂಪದ 'ಅನಾದಿ ಅಜ್ಞಾನವನ್ನು ಭಸ್ಮಮಾಡಲು ಸಾಮರ್ಥ್ಯವುಳ್ಳ ವಿಜ್ಞಾನಾಗ್ನಿಗೆ ಸಾಧನ'ವೆಂದೂ ನಿಶ್ಚಯಿಸಿ ತಿಳಿದಿ ದ್ದೇನೆ.

## ಅರ್ಚನ ಆರಾಧನ ಉಪಾಸನೆಗಳು

೭. ಯೋಗಮಾಯಾ ಸಮಾವೃತನಾದ ದ್ರಷ್ಟೃವಿಗೆ ವೇದ ಗಳಿಂದಲೂ, ಗೀತಾಚಾರ್ಯನಾದ ನಿನ್ನಿಂದಲೂ ಧರ್ಮ-ಅರ್ಥ-ಕಾಮ-

ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಹೇಳಲ್ಪಟ್ಟಿವೆ. (i) ಧರ್ಮ ಅರ್ಥ ಕಾಮುಗಳನ್ನೇ ಪುರುಷಾರ್ಥವೆಂದು ತಿಳಿದಿರುವ ಯೋಗಮಾಯಾ ಸಮಾವೃತರಾದ 'ಜೀವರಿಗೆ', ಬಾಹ್ಯರೂಪದ ಭೋಗ ವಿಷಯುವನ್ನು ಭೋಗಲೋಕಗಳನ್ನು ಕೊಡುವ ಮುತ್ತು ಸೃಷ್ಟಿ-ಸ್ಥಿತಿ-ಲಯ ಕರ್ತೃತ್ವ ವನ್ನು ವಹಿಸಿ ವ್ಯಷ್ಟಿಜೀವರಿಗಾಗಿ ಜಗತ್ತನ್ನು ಧಾರಣೆಮಾಡಿರುವ ಸಮಷ್ಟಿ ರೂಪದ 'ಈಶ್ವರನ' (ಜೀವ—ಈಶ್ವರ ವಿಭಕ್ತಿಪೂರ್ವಕದ ಜ್ಞಾನದಿಂದ) 'ಅರ್ಚನೆ' ಆರಾಧನೆಗಳನ್ನೂ, (ii) 'ಮೋಕ್ಷ'ವೆಂಬ ಪುರುಷಾರ್ಥವನ್ನು ಇಚ್ಛಿಸುವ ಯೋಗಮಾಯಾ ಸಮಾವೃತರಾದ 'ಜೀವರಿಗೆ', ಹೃದಯಸ್ಥ ನಾದ, ಅಂತಹ ಇರುವ ಜೀವ ಈಶ್ವರ ಜಗತ್ತಿನ ವೇಷಧಾರಿಯಾದ "ಸಗುಣಬ್ರಹ್ಮನ ಅನನ್ಯ ಉಪಾಸನೆ"ಯನ್ನೂ, "ನಿರ್ಗುಣಬ್ರಹ್ಮನ ಏಕತ್ವದ ಉಪಾಸನೆ"ಯನ್ನೂ ಆವಾಹನಾಪೂರ್ವಕವಾಗಿ ಹೇಳಲ್ಪಟ್ಟಿವೆ. ಮೊದಲನೇದು ಪ್ರಕೃತಿ ಆರಾಧನೆ. ಎರಡನೇದು ಪರಬ್ರಹ್ಮನ ಆರಾಧನೆ.

ದ್ರಷ್ಟ್ರುವು ಕೋರುವ ಪ್ರಾರ್ಥನೆಗಳು ದ್ರಷ್ಟ್ರುವಿನ ಮನದಲ್ಲಿನ ವಿಮೂಢಭಾವವನ್ನು ಅನುಸರಿಸಿರುವುದರಿಂದ, ಧರ್ಮ ಅರ್ಥ ಕಾಮು ಗಳನ್ನು ಪುರುಷಾರ್ಥವೆಂದು ತಿಳಿದು ಪ್ರಾರ್ಥಿಸುವ ಜೀವನು, ಸರ್ವ ಅತೀತನಾದ ಅಸಂಸಾರಿಯಾದ ಸಗುಣನಿರ್ಗುಣರೂಪದ ಪರಬ್ರಹ್ಮನನ್ನೇ ಆ ರೀತಿ ತಿಳಿಯದೆ, ತನ್ನಂತೆ ಸಂಸಾರಿಯಾದ ತನಗಿಂತ ಅನ್ಯನಾದ ಇಂದ್ರ ನೆಂತಲೂ, ವಿಭೂತಿವರ್ಗಕ್ಕೆ ಸೇರಿದ ಸಂಸಾರಿಗಳಲ್ಲಿ ಶ್ರೇಷ್ಠನಾದ ತ್ರಿನೇತ್ರನಾದ ಸೃಷ್ಟಿ-ಸ್ಥಿತಿ-ಸಂಹಾರಕರ್ತನಾದ ಈಶ್ವರನೆಂತಲೂ ತಿಳಿದು ವಿಭಕ್ತಿ ಪೂರ್ವಕ ಜ್ಞಾನದಿಂದ ಅರ್ಚನೆ ಆರಾಧನೆಗಳನ್ನು ಮಾಡುತ್ತಾನೆ. ಜ್ಞಾನವಿಜ್ಞಾನ ಅಗ್ನಿಗಳನ್ನೂ ಅಜ್ಞಾನ ಸಂಮೋಹಗಳಿಂದ ಮೋಕ್ಷವನ್ನೂ ಪುರುಷಾರ್ಥವೆಂದು ತಿಳಿದು ಪ್ರಾರ್ಥಿಸುವ ಜೀವನು ತನ್ನ ಅಸಂಸಾರಿ ಯಾದ ಅಧ್ಯಾತ್ಮ ಸ್ವರೂಪವನ್ನು ಪ್ರಥಮತಃ ತಿಳಿದು ಸಗುಣ-ನಿರ್ಗುಣ ರೂಪದ ಪರಬ್ರಹ್ಮನನ್ನು "ಅನನ್ಯನೆಂತಲೂ ಏಕನೆಂತಲೂ ಅವಿಭಕ್ತ ಪೂರ್ವಕ ಜ್ಞಾನದಿಂದ" ಅರ್ಚನ ಉಪಾಸನೆಗಳನ್ನು ಮಾಡುತ್ತಾನೆ. ಜ್ಞಾನ-ವಿಜ್ಞಾನ-ಮೋಕ್ಷವನ್ನು ಪುರುಷಾರ್ಥವೆಂದು ತಿಳಿದು ಪ್ರಾರ್ಥಿಸುವ ಜೀವನಿಗೆ ಜ್ಞಾನ ಚಕ್ಷುಷನೆಂದು ಅಸಂಮೂಢಃ ಎಂದು ಹೆಸರು.

## ತ್ರಿಗುಣರೂಪದ ಮೂರು ಹೆಡೆಗಳ ಜಗಜ್ಜನನಿ ವೇಷ
## ಅಮೃತಸ್ವರೂಪದ ಪರಬ್ರಹ್ಮ

ಪರಬ್ರಹ್ಮ = ಅವಿಭಕ್ತ ಅಮೃತಸ್ವರೂಪ ನಿರ್ಲಿಪ್ತನಾದ ಅಸಂಸಾರಿ. ಪರಂಜ್ಯೋತಿ. ಚಕ್ಷುಗಳ ಸಾಪೇಕ್ಷೆ ಇಲ್ಲ.

ಸಗುಣಬ್ರಹ್ಮ = ವೇಷ ಧಾರಿಯಂತೆ ದರ್ಶಿತನು. ನಿರ್ಲಿಪ್ತನಾದ ಅಸಂಸಾರಿ. ಪರಂಜ್ಯೋತಿ. ಚಕ್ಷುಗಳ ಸಾಪೇಕ್ಷೆ ಇಲ್ಲ.



ಅಧ್ಯಾತ್ಮ = ವಿಭಕ್ತ ಅಮೃತಪುತ್ರ ನಿರ್ಲಿಪ್ತನಾದ ಅಸಂಸಾರಿ ಅಂತರ್ಜ್ಯೋತಿ. ಚಕ್ಷು ಸಾಪೇಕ್ಷೆ ಇಲ್ಲ. ಜೀವಭೂತ = ವೇಷವೇ ತಾನೆಂದು ಮೋಹಿತನು. ನೇತ್ರದ್ವಯದ ಸಂಸಾರಿ. ಈಶ್ವರ = ಜಗತ್ ಸೃಷ್ಟಿ ಸ್ಥಿತಿ ಲಯ ಕರ್ತ. ತ್ರಿನೇತ್ರನಾದ ಸಂಸಾರಿ.

## ಜಾಗ್ರತ್ ಸ್ವಪ್ನ ಸುಷುಪ್ತಿ ಹೆಡೆಗಳ ಅಹಂಕಾರ ವೇಷ
## ಅಮೃತಪುತ್ರನಾದ ಜೀವ

(ಜಗತ್ = ಭೂಮಿರಾಪೋನಲೋವಾಯುಃ ಖಂ + ಮನೋಬುದ್ಧಿ ಅಹಂಕಾರ + ವ್ಯಷ್ಟಿ ಜೀವ + ಸಮಷ್ಟಿ ಈಶ್ವರ = ವಿಮೂಢಭಾವದ ದೃಶ್ಯ = ಮಿಥ್ಯಾ ದೃಶ್ಯ = ವ್ಯವಹಾರ ಅರ್ಹತೆ ಇಲ್ಲದ ದೃಶ್ಯ. ಪರಬ್ರಹ್ಮಸ್ವರೂಪಿಣಿ).

**ಜಾಗ್ರತ್ತಿನ ಜಗತ್** (ಪ್ರಕೃತಿ—ಅಸತ್ತು ಅಲ್ಲದ ಭಾವವಸ್ತು)—

ಅವ್ಯಕ್ತಾದ್ವ್ಯಕ್ತಯಸ್ಸರ್ವಾಃ ಪ್ರಭವಂತ್ಯಹರಾಗಮೇ (ಸರ್ವಾಃ = ಜಗತ್)
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತ ಸಂಜ್ಞಿಕೇ ॥ **ಸುಷುಪ್ತಿ**

**ಜಾಗ್ರತ್ತಿನಲ್ಲಿನ ಜೀವ + ಈಶ್ವರ** (ಪ್ರಕೃತಿಸ್ಥರಾದ ಸಂಸಾರಿಗಳು)—

ಸರ್ವ ಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥ ಕಲ್ಪಕ್ಷಯ

**ಪರಬ್ರಹ್ಮ ಪರಂಜ್ಯೋತಿ** (ಅಮೃತಸ್ವರೂಪ—ಅಸಂಸಾರಿ. ಅಭಾವ ಇಲ್ಲದ ಸತ್)—

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ (ಪರಂ-ಓಂ)
ಯಸ್ಸಸರ್ವೇಷು ಭೂತೇಷು ನಶ್ಯತ್ಸುನವಿನಶ್ಯತಿ ॥
ಅವ್ಯಕ್ತೋಽಕ್ಷರ ಇತ್ಯುಕ್ತ ತಮಾಹುಃ ಪರಮಾಂ ಗತಿಂ (ತತ್-ಸತ್)

(ಅಮೃತಸ್ವರೂಪದ ಪರಬ್ರಹ್ಮನಿಗೂ ಅಮೃತಪುತ್ರನಾದ ಜೀವನಿಗೂ ಉದಾಹರಣ ಮಹಾಕಾಶ ಘಟಾಕಾಶ. ಜೀವನಿಗೆ ಆಗಬೇಕಾಗಿರುವ ಪರಬ್ರಹ್ಮ ದರ್ಶನಕ್ಕೆ ಚಕ್ಷುರಿಂದ್ರಿಯಗಳ ಸಾಪೇಕ್ಷೆ ಇರುವುದಿಲ್ಲ. ಅಜ್ಞಾನ ಸಂಮೋಹಗಳ ಆವರಣನಾಶ ಅವಶ್ಯಕ.)

## ಚತುರ್ಥ ಪ್ರಕರಣ

### ಪರಬ್ರಹ್ಮನ ತ್ರಿಗುಣಮಯದ ಜಗತ್ ಮತ್ತು ಅಮೃತಪುತ್ರನ ಜಾಗ್ರತ್-ಸ್ವಪ್ನ-ಸುಷುಪ್ತಿ ವೇಷಗಳು

೧. **ಅರ್ಜುನ.**—ನೀನು, ಅವ್ಯಕ್ತ ಮೂರ್ತಿಯಾದ ಅಜ್ಞಾನದಿಂದ ವ್ಯಕ್ತವಾಗಿರುವ ಸರ್ವಮಿದಂ ರೂಪದ ಜಗತ್ತಿನ ವೇಷಧಾರಿಯಾಗಿರುವುದನ್ನು, ಅಂದರೆ ವೇಷಧಾರಿಯಂತೆ ತೋರುವ ಸಗುಣಬ್ರಹ್ಮ ಸ್ವರೂಪವನ್ನು ಮತ್ತು ಈ ವೇಷ ರೂಪಗಳಿಗೆ ಪರಂ ಆಗಿ ಅವ್ಯಕ್ತವಾಗಿ ಅಚಿಂತ್ಯವಾಗಿ ಅವಿಕಾರಿಯಾಗಿರುವ ಪರಬ್ರಹ್ಮಸ್ವರೂಪವನ್ನು, ಕ್ಷರ-ಅಕ್ಷರ ರೂಪದ ಜಗತ್ತಿಗೆ ಅತೀತನಾಗಿ ವೇದಗಳಲ್ಲೂ ಲೋಕದಲ್ಲೂ ಪ್ರಸಿದ್ಧವಾಗಿರುವ ಅಮೃತಸುಖ ಸ್ವರೂಪವನ್ನೂ ತಿಳಿಸಿ ಯೋಗಮಾಯಾ ಸಮಾವೃತನಾದ (ಅಂದರೆ ಅಜ್ಞಾನಾವೃತನಾದ) ಅಮೃತಪುತ್ರನ ಜ್ಞಾನವನ್ನು ಅಪಹರಣಮಾಡಿ ಬಂಧಿತನನ್ನಾಗಿ ಮಾಡಿರುವ ಬಂಧಕವಸ್ತುವನ್ನು, ಈ ರೀತಿ ಹೇಳಿದ್ದಿ.

**ತ್ರಿಗುಣಮಯದ ಜಗಜ್ಜನನಿ** (ಅಸತ್ತು ಅಲ್ಲದ ಸರ್ವಭಾವದ ಜಗತ್ತಿನ ದೃಶ್ಯ)—

ಸತ್ವರಜಸ್ತಮ ಇತಿಗುಣಾಃ ಪ್ರಕೃತಿ ಸಂಭವಾಃ (ಶತ್ರುತ್ವ ವರ್ತನ)
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಂ ಅವ್ಯಯಂ ॥

**ಜೀವಭೂತಃ** (ಅಧ್ಯಾತ್ಮ ಅಸಂಸಾರಿ)—

ಮನಸಸ್ತು ಪರಾಬುದ್ಧಿಃ ಯೋ ಬುದ್ಧೇಃ ಪರತಸ್ತು 'ಸಃ'
ಏವಂ ಬುದ್ಧೇಃ 'ಪರಂ' ಬುದ್ಧ್ವಾ ಸಂಸ್ತಭ್ಯಾತ್ಮಾನಂ ಆತ್ಮನಾ
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥

**ವೇಷಧಾರಿ**—

ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ।
ತ್ರಿಭಿರ್ಗುಣಮಯೈರ್ಭಾವೈಃ ಏಭಿಸ್ಸರ್ವಮಿದಂ ಜಗತ್
(ಸದಸತ್—ನಸತ್ತನ್ನಾಸತ್)
"ಮೋಹಿತಂ" ನಾಭಿಜಾನಾತಿ ಮಾಮೇಭ್ಯಃ "ಪರಂ ಅವ್ಯಯಂ" (ಅಸಂಸಾರಿ)

**ವೇಷ** (ವ್ಯವಹಾರ ಅರ್ಹತೆ ಇಲ್ಲದ ಮಿಥ್ಯಾದೃಶ್ಯ)—ಸದಸತ್ ಜಗತ್ತಿನ ದೃಶ್ಯ

ದೈವೀಹ್ಯೇಷಾಗುಣಮಯೀ ಮಮಮಾಯಾ ದುರತ್ಯಯಾ
'ಮಾಮೇವ ಯೇ' ಪ್ರಪದ್ಯಂತೇ ಮಾಯಾಂ ಏತಾಂತರಂತಿ'ತೇ' ॥ (ಅಸಂಸಾರಿ)

ಸಗುಣಬ್ರಹ್ಮ (ಈಶ್ವರ–ಅಸಂಸಾರಿ–ಅವಿಭಕ್ತ)—

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ (ಜಗದ್ಗುರು)
ಭ್ರಾಮಯನ್ ಸರ್ವಭೂತಾನಿ ಯಸ್ತ್ರಾರೂಢಾನಿ ಮಾಯಯಾ ॥ ಜೀವರು
ತಮೇವ ಶರಣಂಗಚ್ಛ ಸರ್ವಭಾವೇನ ಭಾರತ । (ಜಗದ್ಗುರು)
(ತಮೇವ ಸರ್ವಭಾವೇನ = ಜಗದ್ರೂಪನಾದ ಜಗತ್ಪರನಾದ ಈಶ್ವರನನ್ನು)

ಜೀವೇಶ್ವರ ಜಗತ್ತನ್ನು ಸೃಷ್ಟಿಮಾಡಿ 'ಜಗಜ್ಜನನಿ' ಎಂದು ಹೆಸರು ಪಡೆದಿರುವ 'ಪ್ರಕೃತಿ' ಅಂದರೆ 'ಅಜ್ಞಾನ'ದಿಂದಲೇ ಸಂಭವವಾಗಿರುವ ಸತ್ವ-ರಜಸ್ತಮೋ ಗುಣಗಳು ಅಜ್ಞಾನಾವೃತನಾದ ದೇಹಿಯನ್ನು ನವ ದ್ವಾರಪುರದ ದೇಹದಿಂದ ಜನಿಸಿದ ಕಾಲದಿಂದಲೇ ಇಚ್ಛಾದ್ವೇಷ ರೂಪದ "ದ್ವಂದ್ವಮೋಹ"ದಿಂದಲೂ ಅಹಂ ಕರ್ತಾ, ಅಹಂ ಭೋಕ್ತಾ, ಅಹಂ ದೇಹಿ ಎಂಬ "ಸಂಮೋಹ"ದಿಂದಲೂ ಬಂಧಿತನನ್ನಾಗಿಮಾಡಿ ಯಂತ್ರಾ ರೂಢನಂತೆ ಪ್ರಕೃತಿಸ್ಥನನ್ನಾಗಿ ಮಾಡಿ, ಅಜ್ಞಾನ ಆವೃತನಾದ ದೇಹಿಯ ವಿಮೂಢಭಾವದಿಂದ ಕಲ್ಪಿತವಾದ ಮಿಥ್ಯಾದೃಶ್ಯವಾದ ಜಗತ್ತನ್ನೇ ಜೀವೇಶ್ವರರಿಂದ ಕೂಡಿದ ಭೋಗವಿಷಯದ ಜಗತ್ತೆಂದು ತಿಳಿಯುವಂತೆ ಮಾಡಿದೆ. ಕ್ಷರಾಕ್ಷರ ಪ್ರಕೃತಿಗೆ ಅತೀತನಾದ ನೀನು ಪ್ರಕೃತಿಸ್ಥನಾದ 'ದೇಹಿಯನ್ನು ಕುರಿತು, ಮಮೈವ ಅಂಶ–ಮಾಮೈವ ಐಷ್ಯಸಿ;' ಅಂದರೆ ನೀನು ಅಮೃತೋದ್ಭವನು–ಅಮೃತ ಸ್ವರೂಪನಾಗಿದ್ದಿ (ತತ್ + ತ್ವಂ + ಅಸಿ) ಎಂದು ಹೇಳುತ್ತಿದ್ದರೂ ಅದು ಅವನಿಗೆ ತಿಳಿಯದಂತೆ ಮಾಡಿ ಕರ್ತೃತ್ವಭೋಕ್ತೃತ್ವದ ಅಹಂ ತ್ವಾಂ 'ವಿಭಕ್ತಿರೂಪದ ಸಂಸಾರಿ ಯೆಂದು ವಿಪರೀತ ಭಾವನೆ'ಯಿಂದ ತಿಳಿಯುವಂತೆ ಮಾಡಿದೆ. ಈ ರೀತಿ ಶತ್ರುವಿನಂತೆ ವರ್ತಿಸುತ್ತಾ ದೇಹಿಯ ಅಮೃತಸ್ವರೂಪವನ್ನೇ ತಿಳಿಯ ದಂತೆಮಾಡಿ ಜ್ಞಾನವನ್ನು ಅಪಹರಿಸಿ ನಿತ್ಯಜಾತ ನಿತ್ಯಮೃತನೆಂಬ ವಿಪರೀತ ಜ್ಞಾನವನ್ನುಂಟುಮಾಡಿ ಭೋಗಲೋಕಗಳಲ್ಲಿನ ಭೋಗಸುಖ ಕ್ಕಾಗಿ ಪಡಬೇಕಾಗಿರುವ ಧಾವಂತಕ್ಕೆ ಗುರಿಮಾಡಿರುವ ಪ್ರಕೃತಿ ಯನ್ನೂ ತ್ರಿಗುಣಮಯವಾದ ಮಾಯರೂಪಗಳನ್ನೂ ಭಸ್ಮಮಾಡಲು ಸಾಧನವನ್ನು "ಮಾಮೇವ ಯೇ ಪ್ರಪದ್ಯಂತೇ ಮಾಯಾಂ ಏತಾಂತ ರಂತಿತೇ" ಎಂದು ಹೇಳಿದ್ದಿ. ಪ್ರಪದ್ಯಂತೇ ಎಂದರೆ ಜ್ಞಾನಾಗ್ನಿಯನ್ನು

ಅಂತ್ಯಫಲವಾಗಿ ಕೊಟ್ಟು, ದುರತ್ಯಯವಾದ ತ್ರಿಗುಣ ರೂಪದ ಮಾಯಾ ರೂಪಗಳನ್ನು ಕಾರಣ ಸಹಿತ ಭಸ್ಮಮಾಡುವ ಸಾಮರ್ಥ್ಯದಿಂದ ಕೂಡಿದ ಪ್ರಪತ್ತಿ (ಜೀವಬ್ರಹ್ಮ ಸಮರ್ಪಣ) ಈ 'ಪ್ರಪತ್ತಿ'ಗೆ ವ್ಯಾಖ್ಯಾನ ವನ್ನು ಪರಾಭಕ್ತಿ ಎಂದೂ ಅನನ್ಯಭಕ್ತಿ ಎಂದೂ ಏಕಭಕ್ತಿ ಎಂದೂ---ಈ ರೀತಿ ಪ್ರಪತ್ತಿಗೆ ಸ್ಥಾನ "ದ್ರಷ್ಟೃವಿನ ವಿಮೂಢಭಾವದ ಸೌಮ್ಯ ಉಗ್ರ ರೂಪದ ದೃಶ್ಯವಾದ ನಿನ್ನ ವಿಶ್ವರೂಪ ದೇಹವಲ್ಲವೆಂದೂ," ವಿಶ್ವರೂಪ ದೇಹಕ್ಕೆ ಪರಂ ಆದ ತಟಸ್ಥ ಲಕ್ಷಣದ ನಿನ್ನ 'ಸಗುಣಬ್ರಹ್ಮ-ನಿರ್ಗುಣ ಬ್ರಹ್ಮವೇ ಸ್ಥಾನವೆಂದೂ,' ಆ ಸ್ಥಾನವು ಅಮೃತ ಸ್ವರೂಪವೆಂದೂ ಜಗಜ್ಜನನಿಯಾದ ಪ್ರಕೃತಿಯಿಂದ ಸೃಷ್ಟಿಯಾದ ಸದಸದ್ರೂಪದ ಜಗತ್ತಿಗೆ ಮೃತ್ಯುಸ್ವರೂಪವೆಂದೂ, ಆ ಸ್ಥಾನವು ಜಗದ್ಗುರುವಾದ ನೀನೇ ಎಂದೂ ನಿನ್ನ ಜ್ಞೇಯಸ್ವರೂಪವನ್ನು

**ಜಗದ್ಗುರು** (ಪರಬ್ರಹ್ಮ-ಅಮೃತಸ್ವರೂಪ-ಪರಂಜ್ಯೋತಿ)—ಶತ್ರುವಿಗೆ ಮೃತ್ಯು

"ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ॥" (ಸದಸಚ್ಚ=ಜಗತ್ತು)

ಎಂದು ಹೇಳಿ ಪ್ರಪತ್ತಿಯ ಕ್ರಮವನ್ನು, ಪ್ರಪತ್ತಿಯ ಪರಮಫಲದ ಲಾಭಕ್ಕಾಗಿ ಪರಬ್ರಹ್ಮ ಪ್ರವೇಶವನ್ನು ಈ ರೀತಿ ತಿಳಿಸಿದ್ದಿ:—

**ಪರಮಫಲದ ಲಾಭ** (ಅಪರೋಕ್ಷ ದರ್ಶನ)—

ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ
ನಿವಸಿಷ್ಯಸಿ ಮಯ್ಯೇವ 'ಅತ ಊರ್ಧ್ವಂ ನ ಸಂಶಯಃ॥' (ಪ್ರವೇಶ)

## ೨. ಅಮೃತಪುತ್ರನಾದ ಭಕ್ತನಿಗೆ ಜಗತ್ತಿನ ಬಂಧನವನ್ನು ಛೇದಿಸಲು ಬೇಕಾದ ಶಸ್ತ್ರ ಮತ್ತು ಅಸಿಗಳು

ಭೋಗಲೋಕಗಳಲ್ಲಿನ ವಿಷಯ ಭೋಗಗಳಿಗೆ ಮೋಹಪಡದೆ ಪ್ರಕೃತಿಯ ಬಂಧನದಿಂದ ಮೋಕ್ಷವನ್ನು ಇಚ್ಛಿಸುವ ಯೋಗಮಾಯಾ ಸಮಾವೃತನಾದ 'ಭಕ್ತನು,' (i) ತ್ರಿಗುಣರೂಪದ ಜಾಗ್ರತ್ ಸ್ವಪ್ನಸುಷುಪ್ತಿ ರೂಪದ ಹೆಡೆಗಳುಳ್ಳ ಅಹಂಕಾರವೆಂಬ ಘಟಸರ್ಪ 'ವೇಷದಿಂದ ಆವೃತನಾಗಿರುವ' ತಟಸ್ಥಲಕ್ಷಣದ 'ಜೀವನ ಅಮೃತಸ್ವರೂಪ'

ವನ್ನೂ ಮತ್ತು (ii) ತ್ರಿಗುಣರೂಪದ ಮೂರು ಹೆಡೆಗಳುಳ್ಳ ಪ್ರಕೃತಿರೂಪದ ಘಟಸರ್ಪ 'ವೇಷದಿಂದ ಆವೃತವಾಗಿರುವ' ತಟಸ್ಥಲಕ್ಷಣದ 'ಪರಬ್ರಹ್ಮನ ಅಮೃತ ಸ್ವರೂಪ'ವನ್ನೂ ತಿಳಿದು, 'ಅಸಂಗ ಶಸ್ತ್ರ, ಜ್ಞಾನ ಅಸಿ'ಗಳಿಂದ ತ್ರಿಗುಣರೂಪದ ಹೆಡೆಗಳನ್ನು ಕತ್ತರಿಸಿ, ವಿಚಾರ ವಿಮರ್ಶಾರೂಪವಾದ ಅನನ್ಯಭಕ್ತಿ, ಏಕಭಕ್ತಿ ಸಾಧನಗಳಿಂದ ಅಜ್ಞಾನ ಸಂಮೋಹರೂಪದ ಘಟಸರ್ಪಗಳನ್ನು ಭಸ್ಮಮಾಡಿ, ಘಟಸ್ಥಿತವಾಗಿದ್ದ ಆಕಾಶವು ಮಹಾಕಾಶವನ್ನು ಏಕತ್ವಮಾಸ್ಥಿತವಾದ ಮಹಾ ಆಕಾಶವೇ ಎಂದು ತಿಳಿಯುವಹಾಗೆ "ಅಹಂ ಪರಬ್ರಹ್ಮಮಸ್ಮಿ, ಅಹಂ ಅಮೃತ ಮಸ್ಮಿ" ಎಂದು ಏಕತ್ವಮಾಸ್ಥಿತನಾಗಿರುವುದನ್ನು ತಿಳಿಯುತ್ತಾನೆ.

## ೩. ಅಮೃತಪುತ್ರನಾದ ಭಕ್ತನ ಜಾಗ್ರತ್ ಸ್ವಪ್ನಸುಷುಪ್ತಿ ವೇಷಗಳು

**ಜಾಗ್ರತ್ ಸ್ವಪ್ನ ಸುಷುಪ್ತಿ ವೇಷ—**

> "ಮಯಾತತಂ ಇದಂ ಸರ್ವಂ ಜಗದವ್ಯಕ್ತಮೂರ್ತಿನಾ (ಅಜ್ಞಾನಮೂರ್ತಿ)
> ಮತ್ಸ್ಥಾನಿ ಸರ್ವಭೂತಾನಿ ನಚಾಹಂ ತೇಷು ಅವಸ್ಥಿತಃ (ಜಗತ್ಪರಃ)
> ನಚ ಮತ್ಸ್ಥಾನಿ ಭೂತಾನಿ ಪಶ್ಯಮೇ ಯೋಗಮೈಶ್ವರಂ
> ಭೂತಭೃನ್ನಚ ಭೂತಸ್ಥೋ ಮಮ ಆತ್ಮಾ ಭೂತಭಾವನಃ ॥"

ಅವ್ಯಕ್ತ ಮೂರ್ತಿಯಾದ ಅಜ್ಞಾನದಿಂದ ವ್ಯಕ್ತವಾಗಿರುವ "ಇದಂ ಸರ್ವಂ" ರೂಪದ 'ಜಾಗ್ರತ್ ದೃಶ್ಯವಾದ ಜಗತ್ತನ್ನು' ನೀನು ವ್ಯಾಪಿಸಿರುವುದೂ, ಆ ಜಾಗ್ರತ್ ಜಗತ್ತನ್ನು ನೀನು ಧರಿಸಿರುವಂತೆ ಕಾಣಬರುತ್ತಿದ್ದರೂ ತತ್ವತಃ ನೀನು ಧರಿಸದೆ ತಟಸ್ಥಲಕ್ಷಣದಿಂದ ಪರಂ ಆಗಿರುವುದೂ, ಜಾಗ್ರತ್ ಜಗತ್ತಿನ ಭೂತಗಳಿಗೆ ನಿನ್ನ ಆಶ್ರಯ ಇಲ್ಲದೆ ಇದ್ದರೂ ಇರುವಂತೆ ಕಾಣುವ ಸಾನ್ನಿಧ್ಯ ಮಾತ್ರದಿಂದಲೇ ವ್ಯಕ್ತರೂಪವನ್ನು ಹೊಂದಿ ಪ್ರಕಾಶದಿಂದ ಇರುವುದೂ, ಇವೆಲ್ಲವೂ ನನ್ನ ಅನುಭವದಲ್ಲೂ, ನಾನು ಧರಿಸಿರುವ ಸುಷುಪ್ತಿ ಸ್ವಪ್ನಗಳಲ್ಲೂ ಕಾಣಬರುತ್ತವೆ. ಸುಷುಪ್ತಿಯಲ್ಲಿನ ಅವ್ಯಕ್ತಮೂರ್ತಿಯಾದ ಅಜ್ಞಾನ ದಿಂದ ವ್ಯಕ್ತವಾಗುವ "ಇದಂ ಸರ್ವಂ ರೂಪದ ಸ್ವಪ್ನದ ಜಗತ್ತನ್ನು"

ನಾನು ವ್ಯಾಪಿಸಿ ಧರಿಸಿರುವಂತೆ ತೋರುತ್ತಿದ್ದರೂ, ತತ್ತ್ವತಃ ನಾನು ಧರಿಸದೆ ತಟಸ್ಥಲಕ್ಷಣದಿಂದ ಪರಂ ಆಗಿ ಇರುತ್ತೇನೆ. ಸ್ವಪ್ನಜಗತ್ತಿನ ಭೂತಗಳಿಗೆ ನನ್ನ ಆಶ್ರಯ ಇಲ್ಲದಿದ್ದರೂ ಇರುವಂತೆ ಕಾಣುವ ಸನ್ನಿಧಿಮಾತ್ರದಿಂದಲೇ ಪ್ರಕಾಶದಿಂದ ಇರುತ್ತದೆ. ಆದರೆ ನಾನು ಅನಾದಿಕಾಲದಿಂದ ಅಜ್ಞಾನ ಆವೃತನಾಗಿ ಅಹಂಕಾರಾಶ್ರಿತನಾಗಿ ವಿಚಾರ ವಿಮರ್ಶೆಗಳಿಲ್ಲದೆ ಸುಷುಪ್ತಿ ಸ್ವಪ್ನಗಳನ್ನು ಅನುಭವಿಸುತ್ತಿರುವುದರಿಂದ ತ್ರಿಗುಣರೂಪದ ಮೂರು ಹೆಡೆಗಳ ಸರ್ಪದಂತಿರುವ ಅಜ್ಞಾನದಿಂದ ಆವೃತನಾಗಿ ನನ್ನ ಪರತ್ವವನ್ನೂ ತಟಸ್ಥಲಕ್ಷಣವನ್ನೂ ಅಮೃತ ಸ್ವರೂಪವನ್ನೂ 'ನಾನು ವೇಷಧಾರಿ' ಎನ್ನುವುದನ್ನೂ ಸ್ಮೃತಿಗೆ ತೆಗೆದುಕೊಳ್ಳದೆ ಯಂತ್ರಾರೂಢನಂತೆ 'ವೇಷವೇ ನಾನು' ಎಂದು ಬುದ್ಧಿ ಭ್ರಮಣದಿಂದ ಬಂಧಿತನಾಗಿ ವ್ಯಕ್ತ ಅವ್ಯಕ್ತ ರೂಪಗಳಲ್ಲೇ ಸ್ಥಿತನಾಗಿ ಸುಷುಪ್ತಿಯಿಂದ ಸ್ವಪ್ನ; ಸ್ವಪ್ನದಿಂದ ಸುಷುಪ್ತಿ ಈ ರೀತಿಯಲ್ಲಿ ಅವಶನಾಗಿ ಅಮೃತಸುಖದಿಂದ ಭ್ರಷ್ಟನಾಗಿ ಪುನರಾವರ್ತಿಯನ್ನು ಹೊಂದುತ್ತಿದ್ದೇನೆ. ಜಾಗ್ರತ್‌ಗೋಚರ ಜಗತ್ತು ಸ್ವಪ್ನ ಗೋಚರ ಜಗತ್ತಿಗಿಂತ ಹೆಚ್ಚು ಸ್ಪಷ್ಟತೆಯಿಂದ ಕಾಣುತ್ತಿದ್ದರೂ, ಜಾಗ್ರತ್ ದೃಶ್ಯದ ಜಗತ್ತಿಗೂ, ಸ್ವಪ್ನ ದೃಶ್ಯದ ಜಗತ್ತಿಗೂ ಸ್ವರೂಪತಃ ವ್ಯತ್ಯಾಸ ಏನೂ ಇರುವುದಿಲ್ಲ. 'ಜಾಗ್ರತ್ ಜಗತ್ತು' ನನ್ನ ಮನಸಷ್ಷೇಂದ್ರಿಯ ಗೋಚರದ ಜಗತ್ತು. 'ಸ್ವಪ್ನ ಜಗತ್ತು' ನನ್ನ ಮನಸಷ್ಷೇಂದ್ರಿಯ ಗೋಚರ ಜಗತ್ತಲ್ಲ. ಕೇವಲ ಮನೋಗೋಚರ ಜಗತ್ತು. 'ಸುಷುಪ್ತಿ' ಯಲ್ಲಿ ಈ ಮನೊ ಇಂದ್ರಿಯವೂ ಇರುವುದಿಲ್ಲ. ಸುಷುಪ್ತಿಯು ಅಹಂಕಾರ ಆವೃತನಾದ ಅಮೃತಪುತ್ರನಾದ ನನ್ನ ಏಕಾಕಿಯಾದ ಸ್ಥಿತಿ. ಇದರಂತೆಯೇ 'ಕಲ್ಪಕ್ಷಯ'ವು ಜಗಜ್ಜನನಿಯಿಂದ ಆವೃತವಾದ ನಿನ್ನ ಅಮೃತಸ್ವರೂಪದ ಏಕಾಕಿ ಸ್ಥಿತಿ. (ಪ್ರಕರಣದ ಆದಿಯಲ್ಲಿನ ಚಿತ್ರ ಸುಷುಪ್ತಿ ಕಲ್ಪಕ್ಷಯಗಳಲ್ಲಿ ಕಾಣುವ ಏಕಾಕಿಯಾದ ದ್ರಷ್ಟೃವಿನ ಚಿತ್ರ.) ಸ್ವಪ್ನಜಾಗ್ರತ್‌ಗಳಲ್ಲಿರುವಂತೆ "ತ್ವಂ" ವಿಭಕ್ತಿಗಳಿಂದಕೂಡಿದ ಜಗತ್ತಿನ ದೃಶ್ಯಗಳಾವುದೂ ನನ್ನ 'ಸುಷುಪ್ತಿ' ಕಾಲದಲ್ಲೂ ಇರುವುದಿಲ್ಲ; ನಿನ್ನ 'ಕಲ್ಪಕ್ಷಯ' ಕಾಲದಲ್ಲೂ ಇರುವುದಿಲ್ಲ.

ಪಞ್ಚೇಂದ್ರಿಯಗಳಿಂದ ಗೋಚರವಾಗುವ ಜಾಗ್ರತ್ ದೃಶ್ಯದ ಜಗತ್ತೂ ಕೂಡ, ಮನದಲ್ಲಿನ ತ್ರಿಗುಣಗಳನ್ನು ಅನುಸರಿಸಿ ವಿಮೂಢ ಭಾವದಿಂದ ಕೆಲವರಿಗೆ ಪ್ರಿಯ-ಅಪ್ರಿಯ ರೂಪದಿಂದ 'ಸತ್ಯವಾಗಿರುವ ಸ್ವಾರಸ್ಯವಾಗಿರುವ ಜಾಗ್ರತ್ ದೃಶ್ಯದ ಜಗತ್ತಿ'ನಂತೆಯೂ, ವಿಮೂಢ ಭಾವವಿಲ್ಲದ ಜ್ಞಾನಚಕ್ಷುಷರಾಗಿಕಾಣುವ ಪ್ರಿಯ-ಅಪ್ರಿಯ ಅರ್ಹತೆ ಇಲ್ಲದ 'ಮಿಥ್ಯಾರೂಪದ ಅಸ್ವಾರಸ್ಯವಾಗಿರುವ ಜಾಗ್ರತ್ ದೃಶ್ಯದ ಜಗತ್ತಿ' ನಂತೆಯೂ, ಸ್ವರೂಪ ನಿಷ್ಪರ್ಶೆಗೆ ಸಿಗದಿರುವ ಜಗದ್ದೃಶ್ಯವಾಗಿ ಗೋಚರ ನಾಗುವುದರಿಂದ ನಾನು ಧರಿಸಿರುವ 'ಸ್ವಪ್ನ ಗೋಚರ ಜಗತ್ತೂ' ಮತ್ತು ನೀನು ಧರಿಸಿರುವ 'ಜಾಗ್ರತ್ ಗೋಚರ ಜಗತ್ತೂ' ಸ್ವಚಕ್ಷುಸ್ಸಿಗೆ ಒಂದು ತರ; ದಿವ್ಯಚಕ್ಷುಸ್ಸಿಗೆ ಇನ್ನೊಂದು ತರ; ಜ್ಞಾನ ಚಕ್ಷುಸ್ಸಿಗೆ ಬೇರೆ ತರ, ಈ ರೀತಿ ಚಕ್ಷುಸ್ಸನ್ನು ಅನುಸರಿಸಿ ತೋರುವ ರೂಪಗಳ ವ್ಯತ್ಯಾಸವೇ ವಿನಃ ಸ್ವರೂಪ ಲಕ್ಷಣಗಳಲ್ಲಿ ಎರಡೂ ತ್ರಿಗುಣ ಮಯವಾದ ಅಜ್ಞಾನದಿಂದ ವ್ಯಕ್ತವಾಗಿರುವ ಯೋಗಮಾಯಾ ದೃಶ್ಯ ಗಳೇ ಎಂದೂ, 'ಸುಷುಪ್ತಿ'ಯು ದ್ರಷ್ಟೃವಿನ ಏಕವಿಭಕ್ತ ಸ್ಥಿತಿ, 'ಸ್ವಪ್ನ ಜಾಗ್ರತ್'ಗಳು ದ್ರಷ್ಟೃವಿನ ಅನೇಕ ವಿಭಕ್ತಗಳ ಸ್ಥಿತಿಗಳೆಂದೂ ವಿಚಾರ ವಿಮರ್ಶೆಗಳಿಂದ ನಿಶ್ಚಯಿಸಿ ತಿಳಿದಿದ್ದೇನೆ. ಮೋಕ್ಷ ಇಚ್ಛೆಯಿಂದ ಕೂಡಿರುವ 'ಭಕ್ತನು' ಅಸಂಗ ಶಸ್ತ್ರದಿಂದಲೂ ಜ್ಞಾನ ಅಸಿಯಿಂದಲೂ "ಜಾಗ್ರತ್ ಸ್ವಪ್ನಸುಷುಪ್ತಿ ರೂಪದ ಅಹಂಕಾರದ ವೇಷಗಳನ್ನು ಛೇದನ ಮಾಡಿ", ತನ್ನ ಪರತ್ವವನ್ನೂ ಅಮೃತ ಸ್ವರೂಪವನ್ನೂ ಮತ್ತು ನೀನು ತ್ರಿಗುಣಮಯದ ಜಗಜ್ಜನನಿ ವೇಷಧಾರಿಯಾದ ಪರಬ್ರಹ್ಮನಾಗಿ ಅಮೃತ ಸ್ವರೂಪನಾಗಿರುವುದನ್ನೂ, ಅವಿಭಕ್ತನಾಗಿ ವಿಭಕ್ತನಿರುವ ಅಮೃತ ಪುತ್ರ ನಂತೆ ವೇಷಧಾರಿಯಾಗಿರುವುದನ್ನೂ ತಿಳಿದು, ನಿನ್ನನ್ನು ಏಕಭಕ್ತಿಯಿಂದ ಭಜಿಸಿ ಅವಿಭಕ್ತನಾದ ಅಮೃತಸ್ವರೂಪನಾಗಿ, ಅಹಂ ಅಮೃತಮಸ್ಮಿ ಎಂಬ ದರ್ಶನದಿಂದ ಇರುತ್ತಾನೆ. (ತೃತೀಯ ಪ್ರಕರಣದ ಆದಿಯಲ್ಲಿನ ಚಿತ್ರ ಸ್ವಪ್ನ ಜಾಗ್ರತ್‌ಗಳಲ್ಲಿ ಅಹಂ ತ್ವಾಂ ವಿಭಕ್ತಿಗಳಿಂದ ಕಾಣುವ ಜೀವ ಈಶ್ವರ ಜಗತ್ ದೃಶ್ಯದ ಚಿತ್ರ.)

## ೪. ತ್ರಿಗುಣಮಯವಾದ ಅಜ್ಞಾನದ ಅವ್ಯಯ–ಅಕ್ಷರ ಸ್ವರೂಪದ ಬಂಧನವನ್ನು ಭಸ್ಮಮಾಡಲು ಸಾಧನ

ಊರ್ಧ್ವಮೂಲಮಧಶ್ಶಾಖಂ 'ಅಶ್ವತ್ಥಂ' ಪ್ರಾಹುರವ್ಯಯಂ । (ಪ್ರಕೃತಿ)
ಛಂದಾಂಸಿಯಸ್ಯ ಪರ್ಣಾನಿಯಸ್ತಂ ವೇದ ಸವೇದವಿತ್ ॥
ದ್ವಾವಿಮೌ ಪುರುಷೌ ಲೋಕೇಕ್ಷರ ಅಕ್ಷರ ಏವಚ । (ಪ್ರಕೃತಿಸ್ಥ ಪುರುಷರು)
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೆ ॥ (ವೃಕ್ಷ-ಬೀಜ)
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ (ನಿರ್ಗುಣಬ್ರಹ್ಮ)
ಯೋ ಲೋಕತ್ರಯಮಾವಿಶ್ಯಬಿಭರ್ತ್ಯವ್ಯಯ ಈಶ್ವರಃ ॥ (ಸಗುಣಬ್ರಹ್ಮ)

ತ್ರಿಗುಣಮಯವಾದ ಅಜ್ಞಾನದೃಶ್ಯವಾದ ಸಚರಾಚರ ರೂಪದ ಜಗತ್ತನ್ನು ಅಶ್ವತ್ಥವೃಕ್ಷಕ್ಕೆ ಹೋಲಿಸಿ ಬಂಧನಸ್ವರೂಪದ ಜಗತ್ತಿಗೆ ಅವ್ಯಯತ್ವವನ್ನು ಹೇಳಿದ್ದಿ. ಬೀಜದಿಂದ ವೃಕ್ಷ ಉತ್ಪತ್ತಿ, ವೃಕ್ಷದಿಂದ ಬೀಜ ಉತ್ಪತ್ತಿ ಈ ರೀತಿ ಬೀಜ ವೃಕ್ಷ ನ್ಯಾಯದಿಂದ ಅವ್ಯಯವಾಗಿ ಅನಾದಿನಿತ್ಯವಾಗಿರುವ ಅಶ್ವತ್ಥವೃಕ್ಷದಂತೆ ಇರುವ ಯೋಗಮಾಯಾ ಸಮಾವೃತನಿಗೆ ಅನುಭವದಲ್ಲಿರುವ 'ಅಜ್ಞಾನಜನಿತವಾದ ಸಂಸಾರ ವೃಕ್ಷವು' ಅಂದರೆ 'ಜಗತ್ ವೃಕ್ಷವು,' ಕಾರಣ ಕಾರ್ಯ ನ್ಯಾಯವನ್ನು ಅನುಸರಿಸಿ ಅನಾದಿಯಾಗಿ ಅವ್ಯಯವಾಗಿ ಅಕ್ಷರವಾಗಿ ಇರುತ್ತದೆ. (ಕಾರಣ=ಅಕ್ಷರವಾದ ಅಜ್ಞಾನ. ಕಾರ್ಯ=ಕ್ಷರವಾದ ಸಂಮೋಹ) ಈ ರೀತಿ ಇರುವ ಅಜ್ಞಾನಜವಾದ ಸಂಸಾರ ವೃಕ್ಷವನ್ನು ಅಂದರೆ ಸಂಮೋಹದ ದೃಶ್ಯವನ್ನು ನಾಶಮಾಡಬೇಕಾದರೆ 'ಬೀಜವೃಕ್ಷ'ಗಳೆರಡನ್ನೂ ಅಂದರೆ 'ಕಾರಣ ಕಾರ್ಯಗಳೆರಡನ್ನೂ' ವಿಚಾರ ವಿಮರ್ಶೆಗಳಿಂದ ನಿಷ್ಕರ್ಷಿಸಿ ತಿಳಿದು 'ಎರಡನ್ನೂ ಭಸ್ಮಮಾಡಬೇಕು'.

### ಅಜ್ಞಾನ ಸಂಮ್ಮೋಹವರ್ತನ — ಸ್ವಯಂವರ್ತನ

ನಕರ್ತೃತ್ವಂ ನಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ
ನಕರ್ಮ ಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥
ಮಯಾ ಅಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್
ಹೇತುನಾನೇನ ಕೌನ್ತೇಯ ಜಗದ್ವಿಪರಿವರ್ತತೇ ॥

"ಪ್ರಭು" ಎಂದು ಹೆಸರನ್ನು ಪಡೆದಿರುವ ಪರಬ್ರಹ್ಮನಾದ ತಟಸ್ಥ ಲಕ್ಷಣದಿಂದ ಇರುವ ನೀನು ನಿರ್ಗುಣ ಬ್ರಹ್ಮನಾಗಿ ನಿರ್ಲಿಪ್ತನಾಗಿ

"ಉದಾಸೀನನಾದ ಅಧ್ಯಕ್ಷನಂತೆ" ಸನ್ನಿಧಿಮಾತ್ರದಿಂದ ಇದ್ದರೂ, ಅಜ್ಞಾನವೂ ಮತ್ತು ಅಜ್ಞಾನಜವಾದ ಯೋಗ ಮಾಯಾ ಸಮಾವೃತನಿಗೆ ಇರುವ ಸಂಮೋಹರೂಪದ ಕರ್ತೃತ್ವ ಭೋಕ್ತೃತ್ವ ರೂಪದ ಸಂಸಾರ ಬಂಧನವೂ, ವಿಮೂಢಭಾವದ ದೃಶ್ಯವಾದ ಭೋಗಲೋಕಗಳ ದೃಶ್ಯವೂ, "ಸ್ವಭಾವಸ್ತು ಪ್ರವರ್ತತೇ" ಎಂದು ಹೇಳಿರುವುದರಿಂದ, ಯೋಗಮಾಯಾ ಸಮಾವೃತನ ಬಂಧನಕ್ಕೆ ಅಜ್ಞಾನವೇ ಸ್ವಯಂ ಕಾರಣವೆಂದೂ, ಅಜ್ಞಾನಜ ದೃಶ್ಯಗಳೂ ಅಜ್ಞಾನಜ ವರ್ತನೆಯೂ ಮೋಹ ಸಂಮೋಹಗಳ ಕಾರ್ಯವೆಂದೂ ನಿಷ್ಕರ್ಷಿಸಿ ತಿಳಿದು, ಅಸಂಗಶಸ್ತ್ರದಿಂದಲೂ ಜ್ಞಾನ ಅಸಿಯಿಂದಲೂ ಕಾರಣ ಕಾರ್ಯಗಳೆರಡನ್ನೂ ಛೇದನಮಾಡಿ ಅಧ್ಯಕ್ಷ ನಾದ ನಿರ್ಲಿಪ್ತನಾಗಿ ಸನ್ನಿಧಿ ಮಾತ್ರ ದ್ರಷ್ಟೃವಾದ ಪ್ರಭುವನ್ನು ಅಂದರೆ ಪರಂಜ್ಯೋತಿಯಾದ ಸಗುಣಬ್ರಹ್ಮ ನಿರ್ಗುಣಬ್ರಹ್ಮನನ್ನು ತಿಳಿದು, ಅನನ್ಯಭಕ್ತಿ ಏಕಭಕ್ತಿಸಾಧನಗಳಿಂದ ವಿಜ್ಞಾನಾಗ್ನಿಯನ್ನು ಪಡೆದು, ಕಾರಣಕಾರ್ಯರೂಪದ ಅಜ್ಞಾನಗಳೆರಡನ್ನೂ ಭಸ್ಮಮಾಡಿದರೆ, ಅಕ್ಷರವೆಂದೂ ಅವ್ಯಯವೆಂದೂ ಅನಾದಿಯಾಗಿ ಪ್ರಸಿದ್ಧಿಯಿಂದ ಇದ್ದ ಅಜ್ಞಾನ ಮತ್ತು ಅಜ್ಞಾನದ ದೃಶ್ಯಗಳು ಬಂಧನಾಸಾಮರ್ಥ್ಯವೂ ಪುನರಾವರ್ತಿ ಇಲ್ಲದಂತೆ ಭಸ್ಮವಾಗುತ್ತವೆ. ಆದರೆ ಪರಬ್ರಹ್ಮನಾದ ಜ್ಞೇಯನಾದ ನಿನಗೆ ಹೇಳಿರುವ ಅನಾದಿ ಅವ್ಯಯ ಶಬ್ದಗಳನ್ನು, ಕಾರಣ ಕಾರ್ಯಸಂಬಂಧದಿಂದ ಹೇಳದೆ ಶಾಶ್ವತ ಸ್ಥಿತಿಯನ್ನು "ಪರಮ ಅಕ್ಷರನು ಉತ್ತಮನು" ಎಂದು ಪರಮ ಶಬ್ದ ಉತ್ತಮ ಶಬ್ದ ಗಳನ್ನು ಹೇಳಿ ನಿನ್ನ ಸ್ವರೂಪವನ್ನು ತಿಳಿಸಿದ್ದಿ. ಅದರಂತೆಯೇ ವೇದಗಳೂ ಕೂಡ ಪರಬ್ರಹ್ಮನ ಮತ್ತು ಕೃತ್ಸ್ನಜಗದ್ವೃಕ್ಷದ ಯಥಾರ್ಥವನ್ನು ವಿಮರ್ಶಿಸಿ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂದು ನಿಷ್ಕರ್ಷೆಯನ್ನು ಮಾಡಿ ಬೋಧಿಸುತ್ತವೆ. ಅಜ್ಞಾನಜವಾದ ಜಗದ್ವೃಕ್ಷವನ್ನು ಕಾರಣ ಕಾರ್ಯಸಹಿತ 'ಯಾರು' ವಿಜ್ಞಾನಾಗ್ನಿಯಿಂದ ಭಸ್ಮಮಾಡಿರುತ್ತಾರೋ 'ಅವರಿಗೆ' ಜಗನ್ಮಿಥ್ಯಾ ದರ್ಶನ ಇರುವುದನ್ನು ಹೇಳುತ್ತಿವೆಯೇ ವಿನಃ, ಅಹಂಕರ್ತಾ ಅಹಂಭೋಕ್ತಾ ಎಂದು ಸಂಸಾರಬಂಧನಕ್ಕೆ ಸಿಕ್ಕಿಕೊಂಡು ಸಂಮೋಹದಿಂದ ಜಗತ್ತಿನಲ್ಲಿರುವ ವಿಷಯ ಭೋಗಗಳಿಗಾಗಿ ಧಾವಂತ

ಪಡುತ್ತಿರುವವರಿಗೆ 'ಜಗನ್ಮಿಥ್ಯಾ' ದರ್ಶನವನ್ನು ಹೇಳುತ್ತಿಲ್ಲ. ಇವರು ವಿಜ್ಞಾನಾಗ್ನಿಯನ್ನು ಪಡೆದು ಜಗತ್ತಿನ ಮಿಥ್ಯಾದರ್ಶನವನ್ನು ಪಡೆಯ ಬೇಕೆಂದು ಹೇಳುತ್ತಿವೆ. ವ್ಯವಹಾರ ಅರ್ಹತೆ ಇಲ್ಲದ ಜಗತ್ತಿನ ಮಿಥ್ಯಾ ದರ್ಶನವನ್ನು ಪಡೆಯುವತನಕ ಥಾವಂತ ತಪ್ಪಿರುವುದಿಲ್ಲ.

## ೫. "ಬ್ರಹ್ಮಸತ್ಯಂ ಜಗನ್ಮಿಥ್ಯಾ ದರ್ಶನದ ಅವಶ್ಯಕತೆ"

ಜ್ಞೇಯವಾದ ಅಮೃತಸುಖವನ್ನು ಆವರಣಮಾಡಿರುವ ಅಜ್ಞಾನರೂಪದ ಜಗತ್ತು ಮೋಹವನ್ನುಂಟುಮಾಡುವ ಬಂಧಕಸ್ವರೂಪದ ಜಗತ್ತಾಗಿರುತ್ತದೆ. ಲೋಕಗಳಲ್ಲಿ ಪ್ರಿಯ-ಅಪ್ರಿಯ ರೂಪಗಳಿಂದ ಗೋಚರವಾಗುವ ವಿಷಯಭೋಗಗಳು ಅನಿತ್ಯಗಳೆಂದೂ ಅಸುಖರೂಪ ಗಳೆಂದೂ ಭಯವ್ಯಥೆಗಳನ್ನುಂಟುಮಾಡುತ್ತಿರುವ ವಿಮೂಢಭಾವದ ದೃಶ್ಯಗಳೆಂದೂ ಯಾವ ದ್ರಷ್ಟೃವು ತಿಳಿದಿರುತ್ತಾನೆಯೋ ಆ ದ್ರಷ್ಟೃವು "ಅನಿತ್ಯಮಸುಖಂ ಲೋಕಮಿಮಂಪ್ರಾಪ್ಯ ಭಜಸ್ವಮಾಮ್" ಎಂದು ನೀನು ಹೇಳಿರುವಂತೆ ತೀವ್ರ ಇಚ್ಛೆಯಿಂದ ವಿಜ್ಞಾನಾಗ್ನಿಯನ್ನು ಪಡೆಯಲು ಏಕತ್ವಮಾಸ್ಥಿತನಾಗಿ ನಿನ್ನನ್ನು ಭಜಿಸುತ್ತಾನೆ. "ಅಹಮಜ್ಞಾನಜಂತಮಃ ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನಭಾಸ್ವತಾ" ಎಂದು ಹೇಳಿರು ವಂತೆ ಆ ದ್ರಷ್ಟೃವಿಗೆ ಇದ್ದ ಅಜ್ಞಾನ ಆವರಣವೂ ವಿಮೂಢಭಾವವೂ ವಿಜ್ಞಾನಾಗ್ನಿಯಿಂದ ಭಸ್ಮವಾಗಲು ಜಗತ್ತಿಗೆ ಇದ್ದ ಬಂದಕಸ್ವರೂಪದ ಮೋಹನಾಶಕ್ತಿಯು ನಾಶವಾಗಿ ಪ್ರಿಯ-ಅಪ್ರಿಯ-ದುಃಖ-ಭಯ-ವ್ಯಥೆ ಗಳನ್ನುಂಟುಮಾಡಲು ಅರ್ಹತೆ ಇಲ್ಲದ ಮಿಥ್ಯಾರೂಪದ ಜಗತ್ತಾಗಿ ಪ್ರಕಾಶಿಸುವುದಲ್ಲದೆ, ಆವರಣದಿಂದ ಮುಚ್ಚಲ್ಪಟ್ಟಿದ್ದ ಅಮೃತಸ್ವರೂಪದ ಜ್ಞೇಯವಸ್ತುವು ಸ್ಪಷ್ಟವಾಗಿಪ್ರಕಾಶಿಸುತ್ತದೆ. ಜಗತ್ತಿನ ಮಿಥ್ಯಾದರ್ಶನ ವನ್ನು ತಿಳಿದಿರುವ ದ್ರಷ್ಟೃವು ಜಗತ್ತನ್ನು 'ನೇತಿ ನೇತಿ' ಎಂದು ಕ್ಷರ ಅಕ್ಷರಗಳೆರಡರಿಂದಲೂ ನಿಷೇಧಿಸಿ ಜ್ಞೇಯನಾದ ನಿನ್ನನ್ನು "ಪರಂ ಊರ್ಧ್ವಂ ಅತೀತಂ" ಎಂದು ಸ್ಪಷ್ಟವಾಗಿ ತಿಳಿಯುತ್ತಾನೆ. ನಿನ್ನ ಸ್ವರೂಪವು ವಿಭಕ್ತಿಗಳಿಲ್ಲದೆ ಇರುವ ಅವಿಭಕ್ತವಾದ ಮಹಾಕಾಶ ವತ್ ಏಕವಾದ ಪೂರ್ಣಸ್ವರೂಪವಾಗಿರುವುದರಿಂದ, ನಿನ್ನನ್ನು "ತ್ವಂ"

ವಿಭಕ್ತಿಯಿಂದ ತಿಳಿದು ತನ್ನನ್ನು "ಅಹಂ" ವಿಭಕ್ತಿಯಿಂದ ತಿಳಿದರೆ ನಿನ್ನನ್ನು ತತ್ವತಃ ಅವಿಭಕ್ತನಂತೆ ತಿಳಿದಂತಾಗುವದಿಲ್ಲ. ಆದ್ದರಿಂದ ನಿನ್ನನ್ನು ತತ್ವತಃ ತಿಳಿಯಬೇಕಾದರೆ ದ್ರಷ್ಟೃವು ತನ್ನನ್ನು "ಅಹಂ" ಪ್ರತ್ಯಯದಿಂದಲೂ ನಿನ್ನನ್ನು "ತ್ವಂ" ಪ್ರತ್ಯಯದಿಂದಲೂ ತಿಳಿಯದೆ, ಅವಿಭಕ್ತನಂತೆಯೇ "ಅಹಂ ಅಮೃತಮಸ್ಮಿ" ಎಂದೇ ಜ್ಞೇಯವಾದ ನಿನ್ನನ್ನು, ಅಮೃತಸ್ವರೂಪನಾದ ನಿನ್ನನ್ನು ತಿಳಿಯಬೇಕಾಗಿದೆ. ಅದ ರಂತೆಯೇ ದ್ರಷ್ಟೃವು ತನ್ನ ಸ್ವರೂಪವನ್ನು 'ಅಹಂ ಅಮೃತಮಸ್ಮಿ–ಅಹಂ ಪರಂಜ್ಯೋತಿ' ಎಂದು ತಿಳಿದು

"ಅಮೃತಂಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ । (ಜ್ಞಾನದೀಪ)
ವೃಷ್ಣೀನಾಂ ವಾಸುದೇವೋಽಸ್ಮಿ ಪಾಣ್ಡವಾನಾಂ ಧನಂಜಯಃ । (ಅವಿಭಕ್ತ)
ಮುನೀನಾಪ್ಯಹಂ ವ್ಯಾಸಃ ಕವಿನಾಮುಶನಾಕವಿಃ ॥ (ಮಹಾಕಾಶವತ್)

ಎಂದು ನೀನು ನನಗೆ ಹೇಳಿರುವಂತೆಯೇ ಹೇಳುತ್ತಾನೆ.

ಅಜ್ಞಾನಾವೃತನಾದ ದ್ರಷ್ಟೃವಿಗೆ ಜಗತ್ತಿನ ಮಿಥ್ಯಾದರ್ಶನದ ಲಾಭ ವಾಗುವತನಕ ರಾಗಭಯವ್ಯಥೆಗಳಿಂದ ಬಂಧನ ತಪ್ಪಿರುವುದಿಲ್ಲ. ಅಸಂಗ ಶಸ್ತ್ರ, ಜ್ಞಾನ ಅಸಿಗಳಿಂದ ಛೇದನಮಾಡಿ ಆವರಣವನ್ನು ಜ್ಞಾನ ವಿಜ್ಞಾನ ಗಳಿಂದ ಭಸ್ಮಮಾಡಿ ಜಗತ್ತಿನ ಮಿಥ್ಯಾಸ್ವರೂಪವನ್ನು ತಿಳಿಯುವತನಕ ಶಾಶ್ವತವಾದ ಅಮೃತಸ್ಥಾನವನ್ನು ತಿಳಿಯುವುದಕ್ಕೂ ನಿರ್ಭಯವಾಗಿ ಅಮೃತಸುಖವನ್ನು ಅನುಭವಿಸುವುದಕ್ಕೂ ಅಶಕ್ಯವಾಗಿರುತ್ತದೆ. ಆದ್ದರಿಂದ ಜಗತ್ತಿನ ರಹಸ್ಯವಾದ ಸ್ವರೂಪವನ್ನು ಬೋಧಿಸುವುದಕ್ಕೆ ಹೊರಟಿರುವ ವೇದಗಳು ಜಗತ್ತಿನ ಮಿಥ್ಯಾಸ್ವರೂಪದ ರಹಸ್ಯವನ್ನು ಬೋಧಿಸುವುದಲ್ಲದೆ, ಅಮೃತಸ್ವರೂಪನಾದ ಪರಬ್ರಹ್ಮನಾದ ನಿನ್ನನ್ನು ತತ್ವತಃ ತಿಳಿದು ಪ್ರವೇಶ ಮಾಡುವುದಕ್ಕೂ ಶಾಶ್ವತವಾದ ಅಮೃತಸುಖವನ್ನು ನಿರ್ಭಯದಿಂದ ಅನುಭವಿಸುವುದಕ್ಕೂ ಅತ್ಯವಶ್ಯಕವಾದ ಸಾಧನವೆಂದೂ ಹೇಳುತ್ತಿವೆ.

## ೬. ಅಮೃತಸುಖದ ಅಪರೋಕ್ಷ ದರ್ಶನ–ಅಪರೋಕ್ಷ ಅನುಭವ

ದ್ರಷ್ಟೃವಾದ ಜೀವನು ಸ್ವಯಂ ಜ್ಞಾನಸ್ವರೂಪನಾದುದರಿಂದ ಚಕ್ಷುಗಳ ಸಹಾಯವಿಲ್ಲದೆ ಜ್ಞೇಯವಸ್ತುಗಳ ತತ್ವತಃ ದರ್ಶನವನ್ನೂ

ಸ್ವಯಂಸುಖಸ್ವರೂಪನಾದ್ದರಿಂದ ಇಂದ್ರಿಯಗಳ ಸಹಾಯವಿಲ್ಲದೆ ಪರಮಫಲವಾದ ಅಮೃತಸುಖವನ್ನೂ ಗ್ರಹಿಸುವ ಸಾಮರ್ಥ್ಯದಿಂದ ಇರುತ್ತಾನೆ. ಚಕ್ಷುಗಳ, ಇಂದ್ರಿಯಗಳ ಸಹಾಯವಿಲ್ಲದೆ ದ್ರಷ್ಟೃವು ಗ್ರಹಿಸುವ ದರ್ಶನ ಅನುಭವಗಳಿಗೆ 'ಅಪರೋಕ್ಷ ದರ್ಶನ–ಅನುಭವ' ಎಂದು ಹೆಸರು. ದ್ರಷ್ಟೃವು ಅನಾದಿಕಾಲದಿಂದ ಅಜ್ಞಾನ–ಸಂಮೋಹ ಆವೃತನಾಗಿ ಅಪಹೃತಜ್ಞಾನಿ–ಅಪಹೃತಸುಖಿಯಾಗಿರುವುದರಿಂದ ಅಪರೋಕ್ಷ ಗ್ರಹಣದ ಸಾಮರ್ಥ್ಯವಿಲ್ಲದೆ ಜಾಗ್ರತ್ ಸ್ವಪ್ನ ಸುಷುಪ್ತಿ ಲೋಕಗಳ ಮತ್ತು ಅಬ್ರಹ್ಮಭುವನ ಲೋಕಗಳ ದರ್ಶನ–ಅನುಭವಗಳನ್ನು ಚಕ್ಷುಗಳ, ಇಂದ್ರಿಯಗಳ ಮೂಲಕವಾಗಿ ಗ್ರಹಿಸುತ್ತಿರುವುದರಿಂದ, ಈ ರೀತಿಯ ದರ್ಶನ–ಅನುಭವಗಳಿಗೆ 'ಪರೋಕ್ಷ ದರ್ಶನ–ಅನುಭವ'ಗಳೆಂದು ಹೆಸರು. ಎಲ್ಲಾ ಚಕ್ಷುರಿಂದ್ರಿಯಗಳು ಅಜ್ಞಾನಜಗಳಾಗಿದ್ದರೂ ಏಕರೂಪದಿಂದ ವರ್ತಿಸದೆ ತಾರತಮ್ಯ ರೂಪದ ಕಲ್ಮಷಕಶ್ಮಲಗಳಿಂದ ಕೂಡಿರುವುದರಿಂದ ಸರ್ವ ದ್ರಷ್ಟೃಗಿಗೆ ಸರ್ವ ಚಕ್ಷುಗಳಿಂದ ಉಂಟಾಗುತ್ತಿರುವ ಜಾಗ್ರತ್ ಸ್ವಪ್ನಗಳಲ್ಲಿನ ದರ್ಶನ–ಅನುಭವಗಳು ಏಕರೀತಿಯಿಂದ ಇರುವುದಿಲ್ಲ. ಅಜ್ಞಾನಜವಾದ ಚಕ್ಷುರಿಂದ್ರಿಯಗಳು ಪ್ರಲಯವನ್ನು ಹೊಂದಿರುವ ಸುಷುಪ್ತಿಕಾಲದಲ್ಲಿನ ಸುಖದ ದರ್ಶನ–ಅನುಭವಗಳು, ಅಜ್ಞಾನ ಆವೃತರಾದ ಸರ್ವ ದ್ರಷ್ಟೃಗಳಿಗೂ ಏಕರೂಪದಿಂದ ಇರುತ್ತಿದ್ದರೂ, ಅವುಗಳು ಅಜ್ಞಾನ ಆವರಣದ ಮೂಲಕ ಉಂಟಾಗುತ್ತಿರುವ ದರ್ಶನ–ಅನುಭವಗಳಾಗಿರುವುದರಿಂದ ಅಪರೋಕ್ಷ ದರ್ಶನ–ಅನುಭವಗಳಾಗಿರುವುದಿಲ್ಲ. ಅಜ್ಞಾನಜವಾದ ಚಕ್ಷುಗಳಿಗೆ ಜ್ಯೋತಿಸ್ವರೂಪದ ಪರಬ್ರಹ್ಮನನ್ನು ಪ್ರಕಾಶಿಸಲು ಅರ್ಹತೆ ಇಲ್ಲದೆ ಇರುವುದರಿಂದ, ಅಜ್ಞಾನ ಆವೃತನಾದ ದ್ರಷ್ಟೃವು, ಏಕರೂಪದ ಜ್ಞೇಯವಸ್ತುವಿನ ದರ್ಶನವನ್ನೂ ಪರಮಫಲವಾದ ಏಕರೂಪದ ಅಮೃತಸುಖವನ್ನೂ ಅಪರೋಕ್ಷವಾಗಿ ಪಡೆಯಲು ತೀವ್ರ ಇಚ್ಛೆ ಇದ್ದರೆ, ಮನುಷ್ಯದೇಹದಿಂದ ಸಂವಾದವನ್ನು ಮಾಡುವ ಜ್ಯೋತಿಸ್ವರೂಪನಾದ ಅಮೃತಸ್ವರೂಪನಾದ ಸಾಕ್ಷಾತ್ಪರಬ್ರಹ್ಮಸ್ವರೂಪದ ಜಗದ್ಗುರುವಿನ ಶರಣುಹೊಂದಿ ಸಂಮೋಹವನ್ನೂ ಸಂಮೋಹಕ್ಕೆ ಕಾರಣವಾದ ಅಜ್ಞಾನವನ್ನೂ ಭಸ್ಮಮಾಡಲು ಸಾಮರ್ಥ್ಯ

ವುಳ್ಳ ಜ್ಞಾನಾಗ್ನಿ ವಿಜ್ಞಾನಾಗ್ನಿಗಳನ್ನು ಪಡೆದು ಭಸ್ಮಮಾಡಿ "ಅಮೃತ ಸುಖದ ಅಪರೋಕ್ಷ ದರ್ಶನ–ಅನುಭವ"ವನ್ನು ಹೊಂದಬೇಕು.

ಅಜ್ಞಾನ ಸಂಮೋಹವು ಭಸ್ಮವಾಗಿ 'ನ ಕಶ್ಚಿತ್ ಕರ್ತುಂ ಮರ್ಹತಿ' ಎಂದು ಹೇಳಿರುವಂತೆ ವ್ಯವಹಾರ ಆರ್ಹತೆ ಇಲ್ಲದ ಜಗತ್ತಿನ ಮಿಥ್ಯಾ ಸ್ವರೂಪವು ಅನುಭವಕ್ಕೆ ಬರಲು, ದ್ರಷ್ಟೃವಿನ ಚಿತ್ತವು ವ್ಯವಹಾರಕ್ಕೆ ಆಶ್ರಯವಿಲ್ಲದೆ ನಿರಾಶ್ರಿತವಾಗಿ ನಿರುದ್ಧವಾಗಿ ಚಲನವಿಲ್ಲದೆ ನಿಲ್ಲುವ ಸ್ಥಿತಿಯನ್ನು ಹೊಂದಿ, ದ್ರಷ್ಟೃವು ಅಪರೋಕ್ಷವಾಗಿ ಅಮೃತಸುಖವನ್ನು ಕೆಳಗೆ ಹೇಳಿರುವಂತೆ ಅನುಭವಿಸುತ್ತಾನೆ.

ಯತ್ರ ಉಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ
ಯತ್ರ ಚೈವ ಆತ್ಮನಾತ್ಮಾನಂ ಪಶ್ಯನ್ನಾತ್ಮನಿತುಷ್ಯತಿ
ಸುಖಂ ಆತ್ಯನ್ತಿಕಂ ಯತ್ತತ್ ಬುದ್ಧಿಗ್ರಾಹ್ಯಮತೀನ್ದ್ರಿಯಃ
ವೇತ್ತಿ ಯತ್ರ ನ ಚೈವಾಯಂ ಸ್ಥಿತ ಶ್ಚಲತಿ ತತ್ವತಃ
ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇನಾಧಿಕಂ ತತಃ ॥

ಸುಷುಪ್ತಿಯಂತೆ ಈ ಸ್ಥಿತಿಯು ಚಿತ್ತದ ಪ್ರಲಯಸ್ಥಿ ಅಲ್ಲ. ಲೋಕತ್ರಯಗಳ ಮಿಥ್ಯಾದರ್ಶನದ ಪ್ರಯುಕ್ತ ವಿಕ್ಷೇಪಕ್ಕೆ ಅವಕಾಶವಿಲ್ಲದೆ ನಿರುದ್ಧದಿಂದ ಉಪರಾಮವನ್ನು ಹೊಂದಿದ ಸ್ಥಿತಿ. ಬುದ್ಧಿ-ಮನ-ಇಂದ್ರಿಯಗಳೂ ಕೂಡ ಚಿತ್ತದಂತೆಯೇ ಉಪರಾಮವನ್ನು ಹೊಂದಿರುತ್ತವೆ. ಈ ಸ್ಥಿತಿಯಲ್ಲಿನ ದ್ರಷ್ಟೃವಿಗೆ, ಪ್ರಸನ್ನ ಚೇತಸನೆಂದೂ ದ್ರಷ್ಟೃವಿನ ಜ್ಞಾನ ಸುಖ ಅನುಭವಗಳಿಗೆ, ಸ್ವರೂಪ ಜ್ಞಾನ ಸ್ವರೂಪ ಸುಖ ಅನುಭವವೆಂದೂ ಹೆಸರು. ಸ್ವರೂಪ ಸುಖ ಅನುಭವವು ವಿಭಕ್ತಿ ಪ್ರವಿಭಕ್ತಿಗಳಿಂದ ಇರದೆ ಸುಷುಪ್ತಿ ಸುಖದಂತೆ ಸರ್ವ ದ್ರಷ್ಟೃರಿಗೂ ಏಕ ರೂಪದಿಂದ ಇರುತ್ತದೆ. ಇದು ಪರಮ ಏಕಾಂತದಲ್ಲಿನ ದ್ರಷ್ಟೃವಿನ ಮಹಾ ಅನುಭವ.

(i) ಜಾಗ್ರತ್ ಸ್ವಪ್ನಗಳು–ಕಲ್ಮಷ ಕಶ್ಮಲಗಳಿಂದ ಕೂಡಿದ ಅಜ್ಞಾನ ಸ್ಥಿತಿ. (ii) ಸುಷುಪ್ತಿ–ಕಲ್ಮಷ ಕಶ್ಮಲಗಳು ಪ್ರಲಯವಾಗಿರುವ ಅಜ್ಞಾನದ ಸ್ಥಿತಿ. (iii) ಸ್ವರೂಪ ಸುಖ ಅನುಭವ– ಅಜ್ಞಾನ ಕಲ್ಮಷ ಕಶ್ಮಲಗಳು ಭಸ್ಮವಾಗಿರುವ ಸ್ಥಿತಿ. ನಿರ್ಭಯ ಸ್ಥಿತಿ. ಪರಮ ಏಕಾಂತ ಸ್ಥಿತಿ.

# ಪಂಚಮ ಪ್ರಕರಣ

## ಜೀವಭೂತನು ಬ್ರಹ್ಮಭೂತನಾಗಲು ಕರ್ಮಯೋಗವು ಕರ್ಮ ಸನ್ಯಾಸಯೋಗವು ಗುಹ್ಯಾದ್ಗುಹ್ಯವಾದ ಆತ್ಮಶುದ್ಧಿ ಜ್ಞಾನ ಸಾಧನಗಳು

೧. **ಗೀತಾಚಾರ್ಯ.**—ಅಜ್ಞಾನಾವೃತರಾಗಿ ಜಂತುಗಳಂತೆ ಕರ್ಮ ಬಂಧನದಲ್ಲಿರುವವರು ಕರ್ಮಬಂಧನದಿಂದ ಬಿಡಿಸಿಕೊಳ್ಳಬೇಕಾಗಿದ್ದರೆ, ಅಜ್ಞಾನವು (ಪ್ರಕೃತಿಯು) ಬಂಧನದಲ್ಲಿಡಲು ಮಾಡಿರುವ ಏರ್ಪಾಡನ್ನು ತಿಳಿದು ಕುಶಲತೆಯಿಂದ ಕರ್ಮವಾಡಿ ಬಂಧನದಿಂದ ತಪ್ಪಿಸಿಕೊಳ್ಳಬೇಕೇ ವಿನಃ ಕರ್ಮ ಮಾಡುವುದನ್ನು ಬಿಡುವುದರಿಂದ ಬಂಧನದಿಂದ ವಿಮುಕ್ತಿ ಯನ್ನು ಹೊಂದಲು ಸಾಧ್ಯವಿರುವುದಿಲ್ಲ. ಕರ್ಮವನ್ನು ಮಾಡದೆಬಿಡು ವುದರಿಂದ ದುರತ್ಯಯವಾದ ತ್ರಿಗುಣಗಳ ಬಂಧನದಿಂದಲೂ, ತ್ರಿಗುಣ ಗಳಿಗೆ ಮಾತೃವಾದ ಅಜ್ಞಾನದ ಬಂಧನದಿಂದಲೂ ತಪ್ಪಿಸಿಕೊಳ್ಳಲು ಶಕ್ಯ ಇಲ್ಲದೇನೇ ಹೋಗುತ್ತದೆ. ಅದೂ ಅಲ್ಲದೆ ಪ್ರಕೃತಿಸ್ಥನಾಗಿ ದೇಹ ಭೃತನಾದವನು ಕರ್ಮವಾಡದೆ ಒಂದು ಕ್ಷಣವಾದರೂ ಇರುವುದಕ್ಕೆ ಆಗುವುದಿಲ್ಲ. ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳನ್ನು ಇಚ್ಛಿಸುವ ದೇಹಭೃತನು ಶರೀರಯಾತ್ರೆಗಾದರೂ ಕರ್ಮ ಮಾಡಲೇ ಮಾಡಬೇಕಾಗಿರುತ್ತದೆ. ಆದರೆ ಅವನು ಶರೀರ ಯಾತ್ರೆಗಾಗಿ, ವಿಷಯಭೋಗಕ್ಕಾಗಿ ಕರ್ಮ ಮಾಡುತ್ತಿದ್ದರೂ, ಯಾವ ರೀತಿಯಲ್ಲಿ ಯಾವ ತಿಳುವಳಿಕೆಯಿಂದ ಕರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಆ ಕರ್ಮಗಳಿಗೆ ಇರುವ ಬಂಧನ ಸಾಮಾರ್ಥ್ಯವು ನಾಶವಾಗಿ ಬಂಧನ ನಿವೃತ್ತಿಯನ್ನು ಹೊಂದಬಹುದು, ಎಂಬ ರಹಸ್ಯ ವನ್ನು ತಿಳಿಯಬೇಕು. ಕರ್ಮಾನುಷ್ಠಾನವನ್ನು ಬಿಡದೆಮಾಡಿ ಕರ್ಮಜ ಗಳ ಫಲವನ್ನು ಪರಿಗ್ರಹಮಾಡದೆ ಕರ್ಮಪ್ರತಿಷ್ಠಿತನಾದ ಅವಿಭಕ್ತನಾದ ಅಸಂಸಾರಿಯಾದ ಸರ್ವಗತ ಬ್ರಹ್ಮನಿಗೆ ಅಂದರೆ ಸಗುಣಬ್ರಹ್ಮನೆಂಬ ತಿಳುವಳಿಕೆಯಿಂದ ಅರ್ಪಣ ಮಾಡಿ, ಗುಣಭೋಕ್ತೃವಾಗದೆ ಶರೀರ ಯಾತ್ರೆಗಾಗಿ ಕೇವಲ ಬೇಕಾಗಿರುವಷ್ಟು ಮಾತ್ರ ಪರಿಗ್ರಹಮಾಡಿ,

ಸರ್ವ ಪರಿಗ್ರಹಗಳನ್ನೂ ಆಶಾಮಮತೆಗಳಿಲ್ಲದೆ ಬಂಧಕಗಳೆಂದು ತಿಳಿದು, ಅವುಗಳು ಕೊಡುವ ಅನಿತ್ಯವಾದ ಅಸುಖ ಸ್ವರೂಪವನ್ನು ತಿಳಿದು ದೃಢ ವಾದ ಮನಸ್ಸಿನಿಂದ ಪರಿತ್ಯಾಗ ಮಾಡಬೇಕು. ಅಂದರೆ ವಿಚಾರ ವಿಮರ್ಶಾ ಪೂರ್ವಕ ತಿಳಿದು ತ್ಯಾಗಮಾಡಬೇಕು. ಈ ರೀತಿಯಲ್ಲಿ ಚಾತುರ್ವರ್ಣ್ಯದ ದೇಹಭೃತರು ಚಾತುರ್ವರ್ಣ್ಯದ ಕರ್ಮಗಳನ್ನು "ಕರ್ಮಗಳಲ್ಲಿ ಪ್ರತಿಷ್ಠಿತನಾದ ಅಸಂಸಾರಿಯಾದ ಅವಿಭಕ್ತನಾದ ಸಗುಣ ಬ್ರಹ್ಮನ ಅರ್ಚನೆ"ಯೆಂದು ತಿಳಿದು ಅನುಷ್ಠಾನಮಾಡಿ ಕರ್ಮಫಲ ಗಳನ್ನು ಅಧ್ಯಕ್ಷನಾದ 'ಸಗುಣ ಬ್ರಹ್ಮನಿಗೆ' ಭಕ್ತಿಯಿಂದ ವಿಶ್ವಾಸ ಪೂರ್ವಕವಾಗಿ 'ಅರ್ಪಣೆಮಾಡಿ' ಪರಿಗ್ರಹಗಳನ್ನು ಪರಿತ್ಯಾಗಮಾಡು ವುದರಿಂದ ಕರ್ಮಕ್ಕೆ ಇರುವ ಬಂಧನ ಸಾಮರ್ಥ್ಯವು ಸಮಗ್ರವಾಗಿ ಅಂದರೆ ಕಾರಣ ಸಹಿತ (ಪ್ರಿಯ-ಅಪ್ರಿಯರೂಪದ ಮೋಹ-ಕಾಮ ಸಂಕಲ್ಪಗಳೇ ಕಾರಣಗಳು) ಭಸ್ಮವಾಗುತ್ತದೆ. ಇದೇ ನೈಷ್ಕರ್ಮ್ಯಸಿದ್ಧಿ.

> ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ಕುರುತೇಽರ್ಜುನ
> ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ಕುರುತೇತಥಾ (ಸರ್ವ=ಪ್ರಕೃತಿ)

## ಅರ್ಪಣದ ರಹಸ್ಯ ಅರ್ಪಣದ ಅಂತ್ಯಫಲ ಜ್ಞಾನಾಗ್ನಿ

೨. ಆದ್ದರಿಂದ ನೀನು ಸ್ವಧರ್ಮವಾದ ಸರ್ವ ಕರ್ಮಗಳನ್ನು ಮಾಡಿದರೂ 'ವಿಷಯ ಭೋಗ'ಗಳ ಭೋಕ್ತೃತ್ವದ ಉದ್ದಿಶ್ಯದಿಂದ ಧರ್ಮ ಅರ್ಥ ಕಾಮಗಳಿಗಾಗಿ ಮಾಡಬೇಡ. ಸರ್ವಕರ್ಮಗಳ 'ಅಂತ್ಯ ಫಲವಾದ ಜ್ಞಾನಾಗ್ನಿ' ಲಾಭಕ್ಕಾಗಿ ಕರ್ಮಮಾಡು. "ಅಸಂಸಾರಿಯಾದ ಕರ್ಮಪ್ರತಿಷ್ಠಿತನಾದ ಸಗುಣ ಬ್ರಹ್ಮ"ನು ಯಾರೋ ನಾನು ನೋಡಿಲ್ಲ ವಲ್ಲಾ ಅನ್ನಬೇಡ. ನಿನ್ನೆದುರಿಗೆ ಸಾಕ್ಷಾತ್ತಾಗಿ ಕುಳಿತು ಸಾರಥ್ಯವನ್ನು ಮಾಡುತ್ತಿರುವ ನಿನ್ನೊಡನೆ ಸಂವಾದವನ್ನು ಮಾಡುತ್ತಿರುವ 'ಮನುಷ್ಯ ದೇಹದ ವಾಸುದೇವನೇ' ಅಸಂಸಾರಿಯಾದ ಸಾಕ್ಷಾತ್ ಕರ್ಮಪ್ರತಿಷ್ಠಿತ 'ಸಗುಣ ಬ್ರಹ್ಮನೆಂದು ತಿಳಿದು' ಅರ್ಪಣೆಮಾಡು. ನೀನು ಪರಿಗ್ರಹ ಮಾಡದೆ ಪರಿತ್ಯಾಗಮಾಡಿ ನನಗೆ 'ಅರ್ಪಣೆ' ಮಾಡಲು ಯೋಗ್ಯವಾದ ಉತ್ತಮ ವಸ್ತುಗಳು ನಿನಗೆ ಲಭಿಸಿಲ್ಲವಲ್ಲಾ ಎಂದು ಯೋಚಿಸಬೇಡ.

ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾಪ್ರಯುಚ್ಛತಿ
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ

ಪತ್ರ, ಪುಷ್ಪ, ಫಲ ಉದಕವಾದರೂ ಸರಿಯೇ ನಿನಗೆ ಏನು ಲಾಭವಾಗಿದೆಯೋ ಅದನ್ನೇ ಸಾಕ್ಷಾತ್ತಾದ ಅಸಂಸಾರಿಯಾದ ಸಗುಣ ಬ್ರಹ್ಮನಾದ ನನಗೆ ಮಾಡುತ್ತಿರುವ ಅರ್ಪಣೆ ಎಂದು ತಿಳಿದು 'ಅರ್ಪಣೆ'ಮಾಡು. (ನಿನ್ನ ಭಾವಮೈದ ವಾಸುದೇವನಿಗೆ ಸಾರಥ್ಯ ಮಾಡಿದ್ದಕ್ಕಾಗಿ ಊಟ ಹಾಕುತ್ತಿದ್ದೇನೆಂದು ತಿಳಿಯಬೇಡ. ಅದು ಕರ್ಮಪ್ರತಿಷ್ಠಿತ ಸಗುಣ ಬ್ರಹ್ಮನ ಅರ್ಪಣೆ ಅಲ್ಲ.) ಪ್ರೀತಿಯಿಂದ ಭಕ್ತಿಯಿಂದ ನೀನು ಕೊಟ್ಟದ್ದನ್ನು ಸ್ವೀಕರಿಸಿ (ಅಶ್ನಾಮಿ) ಭುಜಿಸಿ ತೃಪ್ತನಾಗಿ ನಿನಗೆ ಬೇಕಾಗಿರುವ ಕರ್ಮಗಳ ಅಂತ್ಯ ಫಲವಾದ ಕರ್ಮಬಂಧನವನ್ನು ಸಮಗ್ರವಾಗಿ ನಾಶಮಾಡುವ 'ಜ್ಞಾನಾಗ್ನಿ'ಯನ್ನು ಕೊಡುತ್ತೇನೆ. 'ಅರ್ಪಣ' ಮಾಡುವ ವಸ್ತುಗಳನ್ನು ಸ್ವೀಕರಿಸಲು ಸಗುಣ ಬ್ರಹ್ಮನಾದಂಥಾ ವಾಸುದೇವನೇ ಎಲ್ಲರಿಗೂ ಎಲ್ಲಾ ಕಾಲದಲ್ಲೂ ಎಲ್ಲಿ ಸಿಗುತ್ತಾನೆಂದು ಯೋಚಿಸಬೇಡ. ಅಸಂಸಾರಿಯಾದ ಅವಿಭಕ್ತನಾದ ಸಾಕ್ಷಾತ್ಪರಬ್ರಹ್ಮನೇ ವಿಭಕ್ತಮಿವ ಜೀವರಂತೆ ಸರ್ವರ ಹೃದಯದಲ್ಲೂ ಸರ್ವ ಭೂತಗಳಲ್ಲೂ ಸ್ಥಿತನಾಗಿರುವುದರಿಂದ, ಸ್ವಧರ್ಮನಿಷ್ಠೆಯನ್ನು ಹೇಳಿರುವ ವೇದಗಳೇ, ಜೀವನಿಗೆ ಇರುವ ವಿಭಕ್ತಿರೂಪದ ವಿಪರೀತ ದರ್ಶನವನ್ನು ನಾಶಮಾಡಿ ಸಮದರ್ಶನ ಜ್ಞಾನವನ್ನುಂಟುಮಾಡಲು 'ಅಚೇತನವರ್ಗದ' ಅಶ್ವತ್ಥವೃಕ್ಷಪೂಜೆ, ಗಂಗಾಪೂಜೆ, ತುಳಸಿಪೂಜೆಗಳನ್ನೂ 'ಚೇತನವರ್ಗದ' ಗಜಪೂಜೆ, ನಾಗರಪೂಜೆ, ಯತಿಗಳ ಆರಾಧನೆ, ಅಭ್ಯಾಗತರ ಆರಾಧನೆ, ವೇದವಿತ್ತುಗಳಾದ ಬ್ರಾಹ್ಮಣರ ಮುತ್ತೈದೆಯರ ಪೂಜೆ ಸಂತರ್ಪಣೆ ಸಮಾರಾಧನೆಗಳನ್ನೂ ಹೇಳುತ್ತಿವೆ. ಆದರೆ ಚೇತನ ಪೂಜೆಯೇ ಶ್ರೇಷ್ಠವಾದ್ದರಿಂದ ನೀನು ಚೇತನರಾದ ವಿಭೂತಿವರ್ಗದ ಜೀವರನ್ನೇ ಸಾಕ್ಷಾತ್ಪರಬ್ರಹ್ಮ ಸ್ವರೂಪವೆಂದು ತಿಳಿದು ಅವರ ಅರ್ಚನೆಯನ್ನು ಮಾಡಿ "ಮಯ್ಯರ್ಪಿತ ಮನೋಬುದ್ಧಿ ಮಾಮೇವ ಐಷ್ಯಸಿ" ಎಂದು ನಾನು ಹೇಳಿರುವಂತೆ ನಿನ್ನ 'ಮನೋಬುದ್ಧಿಗಳನ್ನು ಅರ್ಪಣ ಮಾಡಿ', ಸಮಾರಾಧನೆ ಸಂತರ್ಪಣೆ ಪೂರ್ವಕವಾಗಿ ದಕ್ಷಿಣೆ ತಾಂಬೂಲಾದಿಗಳಿಂದ ಸಂತೃಪ್ತಿಪಡಿಸು. ಇದು

ಸಾಧ್ಯವಿಲ್ಲದಿದ್ದರೆ, ನೀನು ನಿನ್ನನ್ನು ಜೀವಭೂತನೆಂದು ತಿಳಿದಿದ್ದರೂ ತತ್ವತಃ ನೀನು ಅವಿಭಕ್ತನಾದ ಸಾಕ್ಷಾತ್ಪರಬ್ರಹ್ಮನೇ ಆಗಿರುವುದರಿಂದ, ನನಗಿಂತ ವಿಭಕ್ತನಾಗಿಲ್ಲವಾಗಿರುವುದರಿಂದ, ನೀನು ಬುದ್ಧಿ ಮನ ಗಳಿಂದ ಮಾಡುವ ಸರ್ವಕರ್ಮಗಳನ್ನೂ ನೀನು ಶರೀರ ಯಾತ್ರೆಗಾಗಿ ಭುಜಿಸುವ ನಿಯತ ಆಹಾರವನ್ನು ಕರ್ಮಪ್ರತಿಷ್ಠಿತನಾದ ಅವಿಭಕ್ತನಾದ ನನಿಗೆ ಸಾಕ್ಷಾತ್ತಾಗಿ ಮಾಡಿದ 'ಅರ್ಪಣೆ' ಎಂದೇ ತಿಳಿದು ಅನುಷ್ಠಾನ ಮಾಡು.

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್
ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥

ಈ ರೀತಿಯಲ್ಲಿ ಮನೋಬುದ್ಧಿಗಳ 'ಮದರ್ಪಣ'ದಿಂದಲೂ ಪರಿಗ್ರಹಗಳ ಪರಿತ್ಯಾಗ ರೂಪದ 'ಮದರ್ಪಣ'ದಿಂದಲೂ ಜೀವಭೂತನು ಕರ್ಮಬಂಧನಗಳಿಂದ ಮುಕ್ತನಾಗಿ, ಸಮುದ್ರದಲ್ಲಿನ ಕಮಲ ಪತ್ರ ದಂತೆ ಯಾವ ಬಂಧನವೂ ಇಲ್ಲದೆ ನವದ್ವಾರಪುರದಲ್ಲಿ ಸುಖವಾಗಿರು ತ್ತಾನೆ. ಈ ರೀತಿ ಮಾಡಲ್ಪಡುವ ಕರ್ಮಕ್ಕೆ 'ಕರ್ಮಯೋಗ'ವೆಂದು ಹೆಸರು.

ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಂಕಲ್ಪ ವರ್ಜಿತಾಃ (ಸರ್ವ=ಪ್ರಕೃತಿ)
ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂಬುಧಾಃ

ಕಾಮಸಂಕಲ್ಪ ವರ್ಜಿತವಾಗಿ ಮಾಡಲ್ಪಟ್ಟ ಕರ್ಮವು 'ಜ್ಞಾನಾಗ್ನಿ-ದಗ್ಧ-ಕರ್ಮ'ವೆಂದೂ, ಈ ರೀತಿ ಕರ್ಮವನ್ನು ಮಾಡುವವನನ್ನು "ಪಂಡಿತ, ಕರ್ಮದ ರಹಸ್ಯವನ್ನು ತಿಳಿದವನು" ಎಂದು ಬುಧರು ಹೇಳುತ್ತಾರೆ.

ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ (ಕತೃತ್ವ ಭೋಕ್ತೃತ್ವ ವರ್ಜಿತಃ)
ಯಜ್ಞಾ ಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥

ಜ್ಞಾನಾಗ್ನಿಯಿಂದ ಕರ್ಮವು ಸಮಗ್ರವಾಗಿ ಪ್ರವಿಲೀಯವಾಗ ಬೇಕಾಗಿದ್ದರೆ, ಕರ್ಮಸಂಗ್ರಹಗಳಾದ ಕತೃತ್ವ, ಕರ್ಮ, ಭೋಕ್ತೃತ್ವ, ಮೂರೂ ಭಸ್ಮವಾಗಬೇಕು. ಕರ್ಮಬಂಧನದ ರಾಹಿತ್ಯವನ್ನು ಹೊಂದಿದ ಮನವು ಮತ್ತು ಬುದ್ಧಿಯು ಅವಿಭಕ್ತನಾದ ಪರಂಜ್ಯೋತಿಯಾದ

ಪರಬ್ರಹ್ಮನಲ್ಲಿ ಅರ್ಪಣವಾಗಿ ಪರಬ್ರಹ್ಮನಲ್ಲೇ ನಿಲ್ಲುತ್ತಿರಲು, ಅಹಂಕಾರ ವಿಮೂಢಾತ್ಮನಾದ ಜೀವನು ಅಹಂಕರ್ತಾ ಎಂದು ಪ್ರಕೃತಿ ಮಾಡುತ್ತಿದ್ದ ಕರ್ತೃತ್ವದ ಆವರಣವನ್ನು ವೇಷಧಾರಿಯಂತೆ ಧರಿಸಿಕೊಂಡು ಜಂತುವಿನಂತೆ ವರ್ತಿಸುತ್ತಿದ್ದ ಮೋಹದ ಆವರಣವೂ, ಕರ್ಮಚೋದನೆಗಳನ್ನು ಮಾಡುತ್ತಿದ್ದ ಜ್ಞಾನಜ್ಞೇಯ ಪರಿಜ್ಞಾತ ರೂಪದ ಆವರಣವೂ, ಕತೃತ್ವ ಕಾರಯಿತ್ವ ಕರ್ಮಫಲ ಭೋಕ್ತೃತ್ವದ ಆವರಣಗಳೂ, ಜ್ಞಾನಾಗ್ನಿಯಿಂದ ಭಸ್ಮವಾಗಿ (i) ಪ್ರಿಯ ಅಪ್ರಿಯ ಭೋಗವಿಷಯ ರೂಪಗಳಿಂದ ಕಾಣುತ್ತಿದ್ದ ಭೋಗಲೋಕಗಳು 'ಭೋಗ ಅರ್ಹವಲ್ಲದ ಮಿಥ್ಯಾದೃಶ್ಯಗಳಂತೆ' ಯಥಾರ್ಥದಿಂದ ಕಾಣಬರುವುವಲ್ಲದೆ, (ii) ಜೀವ ಜೀವಭೇದದಿಂದಲೂ ಜೀವೇಶ್ವರರೂಪದಿಂದಲೂ ಅನೇಕ ವಿಭಕ್ತಿಗಳಿಂದ ಕಾಣುತ್ತಿದ್ದ ದ್ರಷ್ಟ್ರರು ಅನೇಕ ದ್ರಷ್ಟ್ರರಂತೆ ವಿಭಕ್ತಿಗಳಿಂದ ಕಾಣಬರದೆ, ಅವಿಭಕ್ತನಾದ ಏಕನಾದ ವೇಷಧಾರಿಯಾದ 'ಸರ್ವಗತ ಸಗುಣ ಬ್ರಹ್ಮನಂತೆ' ಆದಿತ್ಯವತ್ ಸ್ಪಷ್ಟವಾಗಿ ಮಿಥ್ಯಾದೃಶ್ಯಗಳಿಗೆ ಪರಂ ಆಗಿ ತಟಸ್ಥಲಕ್ಷಣದಿಂದ ಪ್ರಕಾಶಿಸುತ್ತಾನೆ. ಇದು ಸರ್ವಕರ್ಮ ಸನ್ಯಾಸದ 'ಅಂತ್ಯಫಲವಾದ ಜ್ಞಾನಾಗ್ನಿಯಿಂದ ಉಂಟಾಗುವ ಪರಮಫಲ'. ಅಜ್ಞಾನಾವೃತನಾಗಿ "ಅಹಂದೇಹಿ, ಅಹಂಕರ್ತ, ಅಹಂಭೋಕ್ತ" ಎಂಬ ಸಂಮೋಹದಿಂದ ಧಾವಂತಪಡುತ್ತಿದ್ದವನು "ಅಹಂಪರಃ ಅಧ್ಯಾತ್ಮ ಅಹಂ ಅಕರ್ತಾ ಅಭೋಕ್ತಾ ಅಸಂಸಾರಿ ಅಹಂ ಅಮೃತಪುತ್ರ" ಎಂಬ ದರ್ಶನದಿಂದ ಇರುತ್ತಾನೆ. ಇದು ಪ್ರಕೃತಿಯ ಧರ್ಮಗಳ ಪರಿತ್ಯಜ್ಯಸ್ಥಿತಿ.

ಆದ್ದರಿಂದ 'ಕರ್ಮಯೋಗದ ಅಂತ್ಯಫಲ'ವಾದ ಜ್ಞಾನಾಗ್ನಿಯು ಮೋಹದ ಆವರಣವನ್ನು ಭಸ್ಮಮಾಡಿ ಕರ್ಮವನ್ನು ದಗ್ಧಮಾಡಲು ಸಾಧನವೆಂದೂ, 'ಸರ್ವಕರ್ಮಸನ್ಯಾಸದ ಅಂತ್ಯಫಲ'ವಾದ ಜ್ಞಾನಾಗ್ನಿಯು ದ್ರಷ್ಟೃವಿನ ಸಂಮೋಹದ ಆವರಣವನ್ನು ಭಸ್ಮಮಾಡಿ ಕರ್ಮವನ್ನು ಸಮಗ್ರವಾಗಿ ಪ್ರವಿಲೀಯಮಾಡಿ ವಿಭಕ್ತದೇಹಿ ಎಂದು ಇದ್ದವನನ್ನು ಅಹಂ ಅವಿಭಕ್ತ, ಅಧ್ಯಾತ್ಮ, ಅಮೃತಪುತ್ರ ಎಂಬ ದರ್ಶನವನ್ನು ಪಡೆಯಲಿಕ್ಕೂ ಮತ್ತು ಬಹಿ ವಿಭಕ್ತಿಗಳಿಂದ ಕಾಣಬರುತ್ತಿದ್ದ ಜೀವರನ್ನು ಅವಿಭಕ್ತನಾದ ಸಗುಣ ಬ್ರಹ್ಮನೆಂದು ತಿಳಿಯುವುದಕ್ಕೂ ಸಾಧನವೆಂದೂ ತಿಳಿಯಬೇಕು.

ಈ ರೀತಿ ಸಗುಣಬ್ರಹ್ಮ ದರ್ಶನವನ್ನು ಪಡೆದ ಬ್ರಹ್ಮವಿತ್ ಬ್ರಹ್ಮನಲ್ಲೇ ಅಹಂ ತ್ವಾಂ ವಿಭಕ್ತಿಗಳಿಂದ ಸ್ಥಿತನಾಗಿ, ಅಂತಃ ಆತ್ಮಸುಖವನ್ನೂ ಬಹಿಃ ಅಕ್ಷಯ್ಯಸುಖವನ್ನೂ ಅನುಭವಿಸುತ್ತಾನೆ. ಬ್ರಹ್ಮವಿತ್ತಾಗಿ ಬ್ರಹ್ಮಣಿಸ್ಥಿತ ನಾಗಿ 'ಅಮೃತಪುತ್ರ'ನಂತೆ ಇರುವ ಈ ದ್ರಷ್ಟೃವಿಗೆ 'ಬ್ರಹ್ಮಭೂತ'ನೆಂದು ಹೆಸರು. ಆದ್ದರಿಂದ ಜೀವಭೂತನು 'ಬ್ರಹ್ಮಭೂತ'ನಾಗಲು ಅಂದರೆ 'ಅಮೃತಪುತ್ರ'ನಾಗಲು, ಕರ್ಮಯೋಗವು—ಕರ್ಮಸನ್ಯಾಸಯೋಗವು ಗುಹ್ಯಾದ್ಗುಹ್ಯವಾದ ಸಾಧನಗಳೆಂದು ತಿಳಿಯಬೇಕು. (ಅಧ್ಯಾತ್ಮನು, ಬ್ರಹ್ಮಭೂತನು ಅಮೃತಪುತ್ರನು–ಮಮೈವ ಅಂಶು ಇವೆಲ್ಲಾ ಪರ್ಯಾಯ ಪದಗಳು.) ಈ ಸಾಧನಗಳಿಗೆ ಜ್ಞಾನಸಾಧನಗಳು ಎಂದು ಹೆಸರು. ಈ ಬ್ರಹ್ಮಭೂತ ಸ್ಥಿತಿಗೆ ತುರೀಯ ಸ್ಥಿತಿ ಎಂದು ಹೆಸರು.

> ಶುಭಾಶುಭ ಫಲೈ ರೇವಂ ಮೋಕ್ಷ್ಯಸೇ ಕರ್ಮಬಂಧನೈಃ
> ಸಂನ್ಯಾಸಯೋಗ ಯುಕ್ತಾತ್ಮಾ ವಿಮುಕ್ತೋ "ಮಾಮುಪೈಷ್ಯಸಿ"॥
> ಯಸ್ತ್ವಾತ್ಮ ರತಿರೇವಸ್ಯಾತ್ ಆತ್ಮತೃಪ್ತಶ್ಚ ಮಾನವಃ
> ಆತ್ಮನ್ಯೇವ ಚ ಸಂತುಷ್ಟಃ "ತಸ್ಯ ಕಾರ್ಯಂ ನ ವಿದ್ಯತೇ"॥

ವಿಮುಕ್ತಿ=ತ್ರಿಗುಣಾತೀತ ಸ್ಥಿತಿ. 'ವಿ' ಉಪಸರ್ಗ ಮಿಥ್ಯತ್ವವನ್ನು ಸೂಚಿಸುತ್ತದೆ. ಜನ್ಮ ಮೃತ್ಯು ಜರಾದುಃಖಗಳ ಮಿಥ್ಯಾದರ್ಶನವೇ ವಿಮುಕ್ತಿ; ಆತ್ಮಶುದ್ಧಿಯ ಹೆಗ್ಗುರ್ತು.

ಇವನಿಗೆ "ಮಾಂ ಉಪಾಸನ–ಮಾಂ ಶರಣು" ವಿನಃ ಮತ್ತಾವ ಕಾರ್ಯವೂ ಉಳದಿರುವುದಿಲ್ಲ. ಆದ್ದರಿಂದ ಇವನು ಘಟಾಕಾಶವು ಮಹಾಕಾಶ ಸ್ಥಿತವಾಗಿರುವಂತೆ, ಬ್ರಹ್ಮವಿತ್ ಬ್ರಹ್ಮಣಿ ಸ್ಥಿತನಾಗಿರುತ್ತಾನೆ. ಇವನು ಬ್ರಹ್ಮವಿತ್ತು ಆಗಿದ್ದರೂ ಆತ್ಮವಿತ್ತು ಆಗಿಲ್ಲವಾದುದರಿಂದ ಆತ್ಮವಿತ್ತು ಆಗಲು "ಮಾಂ ಉಪಾಸನ–ಮಾಂ ಶರಣು" ಅವಶ್ಯಕ ವಾಗಿರುತ್ತದೆ. ಇವನು ಆತ್ಮವಿಶುದ್ಧಿಗಾಗಿ ಆತ್ಮನನ್ನು ಪರಬ್ರಹ್ಮನಲ್ಲಿ ಸಮರ್ಪಣೆಯನ್ನು ಮಾಡುತ್ತಾನೆ.

## ಷಷ್ಠ ಪ್ರಕರಣ

### ಬ್ರಹ್ಮಭೂತಸು ಪರಬ್ರಹ್ಮನ ಸಾಧರ್ಮ್ಯವನ್ನು ಹೊಂದಿ ಪರಬ್ರಹ್ಮನಾಗಲು ಪರಬ್ರಹ್ಮನು ಹೇಳಿರುವ ವಿಜ್ಞಾನ ಸಾಧನಗಳು

೧. ಗೀತಾಚಾರ್ಯ.—ಅಮೃತಪುತ್ರನಾದ ಬ್ರಹ್ಮಭೂತನಿಗೆ ಆವರಣದಂತಿದ್ದ ಮೋಹಸಂಮೋಹಗಳು ಭಸ್ಮವಾಗಿರುವುದರಿಂದ ಅವನು ತನ್ನನ್ನು ಬುದ್ಧಿ ಮನಗಳಿಗೆ ಪರನಾಗಿರುವ ದೇಹ ಇಂದ್ರಿಯಗಳಿಗೆ ಪರನಾಗಿರುವ ಮಮೈವಾಂಶು, ಅಮೃತಪುತ್ರ, ಅಧ್ಯಾತ್ಮನೆಂದು ತಿಳಿದಿದ್ದರೂ, ಅವನು ನನ್ನನ್ನು ಅವಿಭಕ್ತನಾದ, ಜಗತ್ತಿಗೆ ಪರಂ ಆದ ಸಗುಣಬ್ರಹ್ಮನೆಂದು ತಿಳಿದಿದ್ದರೂ, ಅವನು ತನ್ನನ್ನು ನನಗೆ ಅನನ್ಯನು ಎಂದು ತಿಳಿಯದೆ, ವಿಭಕ್ತನು ಅನ್ಯನು ಎಂದು ತಿಳಿದಿರುತ್ತಾನೆ. ಬ್ರಹ್ಮಭೂತನಿಗೆ ಪರಬ್ರಹ್ಮನಾದ ಅವಿಭಕ್ತನಾದ ನನ್ನ 'ಅನನ್ಯತ್ವ ಅದರ್ಶನರೂಪದ ಅಜ್ಞಾನ ಆವರಣವೂ' ಮತ್ತು ನನ್ನ 'ಏಕತ್ವ ಅದರ್ಶನರೂಪದ ಆವರಣವೂ' ನಾಶವಾಗಿರುವುದಿಲ್ಲ. ಈ ರೀತಿ ಇರುವ ಅಜ್ಞಾನ ಆವರಣಗಳೆರಡೂ ಭಸ್ಮವಾಗುವತನಕ ಮೋಕ್ಷಾರ್ಥಿಯಾದ ಬ್ರಹ್ಮಭೂತನಿಗೆ (ಅಮೃತಪುತ್ರನಿಗೆ) ಅಜ್ಞಾನಬಂಧನದಿಂದ ಮೋಕ್ಷವು ಶಾಶ್ವತವಾಗಿ ಸಿಗುವಂತಿಲ್ಲ.

**೨. ಅಜ್ಞಾನ-ತಮಸ್ಸುಗಳಿಗೆ ಇರುವ ಕಾರಣಕಾರ್ಯ ಸಂಬಂಧ ಬೀಜವೃಕ್ಷನ್ಯಾಯವತ್—**

"ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ"
ಪ್ರಮಾದ ಆಲಸ್ಯ ನಿದ್ರಾಭಿಃ ತನ್ನಿಬಧ್ನಾತಿ ಭಾರತ ॥
ಜ್ಞಾನಮಾವೃತ್ಯತು ತಮಃ ಪ್ರಮಾದೇ ಸಂಜಯತ್ಯುತ
"ಪ್ರಮಾದಮೋಹೌ ತಮಸೋ ಭವತೋ ಅಜ್ಞಾನಮೇವ ಚ ॥"

ಬೀಜವೃಕ್ಷನ್ಯಾಯದಿಂದ ಅನಾದಿಯಾಗಿ ಅನುಸ್ಯೂತವಾಗಿ ಅವ್ಯಯವಾಗಿರುವ ವೃಕ್ಷವನ್ನು ವಿನಾಶಮಾಡಬೇಕಾದರೆ, ವೃಕ್ಷವನ್ನು ನಾಶಮಾಡಿ ಬೀಜವನ್ನು ನಾಶಮಾಡದೆ ಬಿಟ್ಟರೆ ಪುನಃ ಕಾಲಾಂತರದಲ್ಲಿ ಬೀಜದಿಂದ ವೃಕ್ಷವು ಉತ್ಪತ್ತಿ ಆಗುತ್ತದೆ. ಬೀಜವನ್ನು ನಾಶಮಾಡಿ

ವೃಕ್ಷವನ್ನು ನಾಶಮಾಡದೆ ಬಿಟ್ಟರೂ ಪುನಃ ಮರದಿಂದ ಬೀಜಗಳು ಉತ್ಪತ್ತಿಯಾಗಿ ವೃಕ್ಷವು ಅವ್ಯಯವಾಗಿಯೇ ನಿಲ್ಲುತ್ತದೆ. ಆದ್ದರಿಂದ ವೃಕ್ಷವನ್ನು ವಿನಾಶಮಾಡಲು ಪ್ರಯತ್ನಮಾಡುವವನು ಬೀಜ ವೃಕ್ಷ ಗಳೆರಡನ್ನೂ ವಿನಾಶಮಾಡಿದರೆ ವೃಕ್ಷವು ಪುನರಾವರ್ತಿ ಇಲ್ಲದಂತೆ ನಾಶ ವಾಗುತ್ತದೆ. ಅದರಂತೆಯೇ ಜಗದ್ದೃಶ್ಯವಾದ ತಮಸ್ಸು ಅಜ್ಞಾನದಿಂದ ಹುಟ್ಟಿ, ಅಜ್ಞಾನವನ್ನೇ ವೃದ್ಧಿಮಾಡುತ್ತಾ ಬೀಜವೃಕ್ಷ ನ್ಯಾಯದಿಂದ ಅವ್ಯಯವಾಗಿ ಅಕ್ಷರವಾಗಿರುವುದರಿಂದ ಅಜ್ಞಾನ ತಮಸ್ಸುಗಳೆರಡನ್ನೂ ವಿನಾಶಮಾಡುವತನಕ ಪುನರಾವರ್ತಿ ತಪ್ಪುವುದಿಲ್ಲ. ಮೋಹ ಸಂಮೋಹದ ದೃಶ್ಯವಾದ ತಮೋರೂಪದ ಜಗತ್ತನ್ನು, ಮೃತ್ಯುವಿನಂತೆ, ಅಸಂಗಶಸ್ತ್ರ ಜ್ಞಾನ ಅಸಿಗಳಿಂದ ಛೇದಿಸಿ, ಜ್ಞಾನಾಗ್ನಿಯಿಂದ ಭಸ್ಮಮಾಡಿ ಯಾವುದಕ್ಕೂ ಅರ್ಹತೆ ಇಲ್ಲದ ಮಿಥ್ಯಾದೃಶ್ಯವಾಗಿ ಮಾಡಿದಾಗ್ಯೂ, ಅಜ್ಞಾನ ಆವೃತನಾದ ಬ್ರಹ್ಮಭೂತನು ಬೀಜರೂಪದಂತಿರುವ ಪರಬ್ರಹ್ಮನ 'ಅನನ್ಯತ್ವ ಅದರ್ಶನ ರೂಪದ ಅಜ್ಞಾನ'ವನ್ನೂ 'ಏಕತ್ವ ಅದರ್ಶನ ರೂಪದ ಅಜ್ಞಾನ'ವನ್ನೂ ವಿಜ್ಞಾನ ಅಗ್ನಿಯಿಂದ ಭಸ್ಮಮಾಡುವತನಕ ಬಂಧನಗಳ ಪುನರಾವರ್ತಿಗಳು ತಪ್ಪುವದಿಲ್ಲ. ಅಮೃತಸುಖದ ಅಪರೋಕ್ಷ ದರ್ಶನ–ಅನುಭವಗಳು ಸ್ಥಿರವಾಗಿ ಸಿಗುವಂತಿಲ್ಲ. ಚಿತ್ತಕ್ಕೆ ಪ್ರಸನ್ನತೆ ಸ್ಥಿರವಾಗಿ ಇರುವುದಿಲ್ಲ. (ಬುದ್ಧಿಃ ನ ಪರ್ಯವತಿಷ್ಠತೇ)

ಗೀತಾಚಾರ್ಯ–

> ಪರಂಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ
> ಯಜ್ಞಾತ್ವಾ ಮುನಯಸ್ಸರ್ವೇ ಪರಾಂಸಿದ್ಧಿಮಿತೋಗತಾಃ
> ಇದಂಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ (ವಿಜ್ಞಾನಾಗ್ನಿ)
> ಸರ್ಗೇಪಿನೋಪಜಾಯಂತೇ ಪ್ರಲಯೇ ನ ವ್ಯಥನ್ತಿ ಚ ॥

ಪರಬ್ರಹ್ಮನಾದ ನನ್ನ ಸಾಧರ್ಮ್ಯವನ್ನು (ಮದ್ಭಾವವನ್ನು) ವಿವಸ್ವತ-ಮನು-ಇಕ್ಷ್ವಾಕು-ಜನಕ ಇತ್ಯಾದಿ ಅನೇಕ ಮುನಿಗಳು ಈ ಕೆಳಗೆ ಹೇಳಿರುವ ಸಾಧನದಿಂದ ಈ ಮನುಷ್ಯಲೋಕದಲ್ಲಿರುವಾಗಲೇ ದೇಹ ಪಾತಕ್ಕೆ ಮುಂಚೆಯೇ ಪಡೆದಿರುತ್ತಾರೆ. ಆ ಸಾಧನಗಳನ್ನು ಪುನಃ ಹೇಳುತ್ತೇನೆ ಕೇಳು.

### ೩. ಆವಾಹನಪೂರ್ವಕ ಪರಿ ಉಪಾಸನ–ಆತ್ಮವಿಶುದ್ಧಿ:

ವೀತರಾಗ ಭಯಕ್ರೋಧಾಃ ಮನ್ಮಯಾ ಮಾಮುಪಾಶ್ರಿತಾಃ
ಬಹುವೋ ಜ್ಞಾನತಪಸಾಪೂತಾ ಮದ್ಭಾವಮಾಗತಾಃ ॥ (ಅನನ್ಯಚಿಂತನ)
ಅನ್ತಕಾಲೇಚ "ಮಾಮೇವ ಸ್ಮರನ್" ಮುಕ್ತ್ವಾ ಕಳೇಬರಂ (ಜ್ಞೇಯಬ್ರಹ್ಮ)
ಯಪ್ರಯಾತಿ ಸಮದ್ಭಾವಂ ಯಾತಿನಾಸ್ತ್ಯತ್ರಸಂಶಯಃ
ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ (ವಿಭಕ್ತಿ ಪ್ರವಿಭಕ್ತಿ)
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ (ಅನನ್ಯ ದರ್ಶನ)
ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ (ಮಮಸಾಧರ್ಮ್ಯದರ್ಶನ)
ಈಕ್ಷತೆ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ (ಅವಿಭಕ್ತ ದರ್ಶನ)

ಜಾಗ್ರತ್ ಸ್ವಪ್ನಲೋಕಗಳು ವ್ಯವಹಾರ ಅರ್ಹತೆ ಇಲ್ಲದ ಮಿಥ್ಯಾ ದೃಶ್ಯಗಳೆಂದು ತತ್ವತಃ ತಿಳಿದು ರಾಗ ಭಯ ಕ್ರೋಧಗಳಿಂದ ವಿವರ್ಜಿತ ರಾಗಿರುವ ಯಾವ ಬ್ರಹ್ಮಭೂತನು ವಿಭಕ್ತವಾದ ಅಹಂಕಾರ ಆಶ್ರಯ ವನ್ನು ಬಿಟ್ಟು, ಅವಿಭಕ್ತನಾದ ನನ್ನನ್ನು ಅನನ್ಯನೆಂದು ಆಶ್ರಯಿಸಿ

**ಅನನ್ಯಚಿಂತನ** (ಅನನ್ಯಃ=ನ ಅನ್ಯಃ) ದಿಂದ ಅಜ್ಞಾನ ಜಂತವಃ ನಾಶ—

ಅನನ್ಯಾಶ್ಚಿನ್ತಯನ್ತೋ "ಮಾಂ" ಯೇ ಜನಾಃ ಪರ್ಯುಪಾಸತೆ(ಜ್ಞೇಯಬ್ರಹ್ಮ)
ತೇಷಾಂ ನಿತ್ಯಾಭಿಯುಕ್ತಾನಾಂ 'ಯೋಗಕ್ಷೇಮಂ ವಹಾಮ್ಯಹಂ' ॥

ವಿಚಾರ ವಿಮರ್ಶೆಗಳಿಂದ ಪರಿಚಿಂತನೆಯನ್ನು ಮಾಡುತ್ತಾ ನನ್ನನ್ನು ಮನ ದಿಂದ ಎಡಬಿಡದೆ ಅನನ್ಯನೆಂದು ಅತಿ ಸಮೀಪದಲ್ಲಿರುವನೋ ಅಂಥಾ ಭಕ್ತನನ್ನು ಆವೃತಮಾಡಿರುವ "ಅನನ್ಯತ್ವ ಅದರ್ಶನರೂಪದ ಅಜ್ಞಾನವು" ಭಸ್ಮವಾಗಿ ಅವನು ಪರಿಶುದ್ಧನಾಗಿ ನನ್ನ ಮದ್ಭಾವವನ್ನು—ಸಾಧರ್ಮ್ಯ ವನ್ನು ಹೊಂದುತ್ತಾನೆ. ಅಮೃತಪುತ್ರನೆಂದು ತನ್ನನ್ನು ವಿಭಕ್ತಿಯಿಂದ ತಿಳಿದು ಅಕ್ಷಯ್ಯ ಸುಖವನ್ನು ಅನುಭವಿಸುತ್ತಿದ್ದ ಬ್ರಹ್ಮಭೂತನು, ನನ್ನ ಅನನ್ಯತ್ವವನ್ನು ತಿಳಿದು ಸಾಧರ್ಮ್ಯವನ್ನು ಪಡೆದು ಬ್ರಹ್ಮಸಂಸ್ಪರ್ಶ ಅತ್ಯಂತ ಸುಖವನ್ನು ಅನುಭವಿಸುತ್ತಾ ಜಾಗ್ರತ್ ಸ್ವಪ್ನಲೋಕಗಳು ಅಸ್ವಾರಸ್ಯವಾದ ಮಿಥ್ಯಾ ದೃಶ್ಯಗಳಂತೆ ಉತ್ಪತ್ತಿ ನಾಶವನ್ನು ಹೊಂದುತ್ತಿದ್ದರೂ ತಾನು ಗಮನಾಗಮನಗಳಿಲ್ಲದೆ ನಿರ್ವಿಕಾರನಾಗಿ ಆ ದೃಶ್ಯಗಳಿಗೆ ಪರಂ ಆಗಿ ನನ್ನಂತೆಯೇ ಸಗುಣಬ್ರಹ್ಮನಾಗಿರುತ್ತಾನೆ. ಬ್ರಹ್ಮಭೂತನು ನನ್ನ ಸಾಧರ್ಮ್ಯವನ್ನು ಮದ್ಭಾವವನ್ನು ಪಡೆದಮೇಲೆ, ಅಹಂಕಾರ ಆಶ್ರಿತನಾಗಿ

ತನ್ನನ್ನು ವಿಭಕ್ತಿಯಿಂದ ಅಧ್ಯಾತ್ಮನೆಂದೂ ಅಮೃತಪುತ್ರನೆಂದೂ ತಿಳಿಯದೆ, ಸರ್ವಕ್ಕೂ ಪರಂ ಆದ ಸರ್ವಾತೀತವಾದ ಅವಿಭಕ್ತನಾದ ಸಗುಣಬ್ರಹ್ಮ ನೆಂದೂ ಕೃತ್ಸ್ನಜಗದ್ರೂಪದ ವೇಷಧಾರಿಯೆಂದೂ ತಿಳಿದಿರುತ್ತಾನೆ. ನನಗೂ ನನ್ನ ಮದ್ಭಾವವನ್ನು ಪಡೆದಿರುವ ನನ್ನ ಪರಮಭಕ್ತನಿಗೂ ಇರುವ ಪರಸ್ಪರ ದರ್ಶನಗಳು ಯಾವ ರೀತಿ ಇರುತ್ತೆಂದರೆ:

**ಅನನ್ಯಭಕ್ತ** (ಸಗುಣಬ್ರಹ್ಮ–ಸರ್ವಸ್ಥಿತನಂತೆ ಕಾಣುವ ಸರ್ವಾತೀತ) ಬ್ರಹ್ಮವಿತ್—

ಯೋಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ (ಅವಿಭಕ್ತದರ್ಶನ)
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ (ಅವಿಭಕ್ತದರ್ಶನ)

ಅವನು ತನ್ನನ್ನು ಸರ್ವರೂಪದ ಸರ್ವಮಯನಾದ ಸರ್ವಾತೀತನಾದ ಅವಿಭಕ್ತನಾದ ವೇಷಧಾರಿ ಎಂದು ತಿಳಿದಿರುವಂತೆಯೇ, ನನ್ನನ್ನೂ ಸರ್ವ ರೂಪದ ಸರ್ವಮಯನಾದ ಸರ್ವಾತೀತನಾದ ಅವಿಭಕ್ತನಾದ ವೇಷಧಾರಿ ಯಂತೆಯೇ ತಿಳಿದಿರುತ್ತಾನಾದ್ದರಿಂದ ಅವನು ನನ್ನನ್ನೂ, ನಾನು ಅವನನ್ನೂ ಎಡಬಿಡದೆ ಅನನ್ಯ ಸ್ವರೂಪದಿಂದ ಕಾಣಬರುವದರಿಂದ ಅವನು ಯಾರು ನಾನು ಯಾರು ಎಂಬುದು ವಿಭಕ್ತಿಗಳಿಂದ ನಿರ್ದೇಶಿಸಿ ಹೇಳಲು ಸಾಧ್ಯವಿಲ್ಲದಂತೆ ಇರುತ್ತೇವೆ.

### ೪. ಜ್ಞೇಯಬ್ರಹ್ಮನಾದ ನನ್ನ ಪ್ರವೇಶ (ಬ್ರಹ್ಮಾರ್ಪಣ–ವಾಸುದೇವಾರ್ಪಣ)

ಈ ರೀತಿ ಇರುವ ನನ್ನ ಸಾಧರ್ಮ್ಯವನ್ನು ಪಡೆದಿರುವ ಭಕ್ತನು ತನ್ನನ್ನು ಪೂರ್ವದಂತೆ "ವಿಭಕ್ತ ಅಹಂ" ಎಂದು ತಿಳಿಯದೆ "ಅವಿಭಕ್ತ ಅಹಂ" ಎಂದು ನಾನು ತಿಳಿದಿರುವಂತೆಯೇ ತಿಳಿದಿದ್ದರೂ, ಅವನು ತನ್ನನ್ನು "ಅಹಂ" ಎಂದೂ ನನ್ನನ್ನು "ತ್ವಂ" ಎಂದೂ ವಿಭಕ್ತಿ ಪೂರ್ವಕವಾಗಿಯೇ ತಿಳಿಯುತ್ತಿದಾನೆ. ನಾನು ಅವಿಭಕ್ತನಾದುದರಿಂದ ನನ್ನನ್ನು "ತ್ವಂ" ಎಂದು ಸಂಭೋದಿಸಿದರೆ ನನ್ನನ್ನು ಅವಿಭಕ್ತನೆಂದು ತಿಳಿದಂತಾಗುವುದಿಲ್ಲ. ಆದ್ದರಿಂದ ನನ್ನನ್ನು "ತ್ವಂ" ಎಂದು ವಿಭಕ್ತಿ ಪೂರ್ವಕವಾಗಿ ತಿಳಿಯುವ ಅನನ್ಯಭಕ್ತನನ್ನು ಆತ್ಮವಿತ್ತು ಎಂದು ಹೇಳು ವುದಕ್ಕಾಗುವುದಿಲ್ಲ. ಆದ್ದರಿಂದ ಅನನ್ಯ ಭಕ್ತನು ಅವಿಭಕ್ತನಾಗಿದ್ದರೂ,

ಅವನಿಗೆ "ನನ್ನ ಏಕತ್ವ ಅದರ್ಶನರೂಪದ ಅಜ್ಞಾನ ಆವರಣ" ವಿರುವುದರಿಂದ ಈ ಅಜ್ಞಾನಾವರಣವನ್ನು ಭಸ್ಮಮಾಡಲು ಪರಂಜ್ಯೋತಿಯಾದ ನನ್ನನ್ನು "ಏಕತ್ವಮಾಸ್ಥಿತನಾಗಿ" ಭಜಿಸಬೇಕು. ಈ ರೀತಿಯ ಭಜನೆಯೇ ಸರ್ವ ಅನರ್ಥಗಳಿಗೂ ಮೂಲಕಾರಣವಾಗಿರುವ ಏಕತ್ವ ಅದರ್ಶನರೂಪದ ಅಜ್ಞಾನವನ್ನು ಭಸ್ಮಮಾಡಲು ತಿಳಿಯಬೇಕಾದ 'ಪರಮಸಾಧನ'. ಈ ಸಾಧನಕ್ಕೆ ವಿಜ್ಞಾನಸಾಧನ ಎಂದೂ ಜ್ಞೇಯ ಬ್ರಹ್ಮನ ಪ್ರವೇಶಸಾಧನ ಎಂದೂ ಹೆಸರು. ಇದೇ ಬ್ರಹ್ಮಾರ್ಪಣ.

**ಪರಮಸಾಧನ ಏಕತ್ವಭಜನ—**



ಸರ್ವಭೂತಸ್ಥಿತಂ ಯೋಮಾಂ ಭಜತ್ಯೇಕತ್ವಮಾಸ್ಥಿತಃ
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿವರ್ತತೇ ॥
ತತೋ ಮಾಂ ತತ್ವತೋ ಜ್ಞಾತ್ವಾವಿಶತೇ ದನಂತರಂ (ಜ್ಞೇಯಬ್ರಹ್ಮಪ್ರವೇಶ)

**(ಮಹಾಕಾಶವತ್ ದರ್ಶನ-ಸರ್ವತ್ರ ಸಮದರ್ಶನ-ಆತ್ಮದರ್ಶನ)—**

ಅತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿಯೋಽರ್ಜುನ
ಸುಖಂವಾಯದಿವಾದುಃಖಂ ಸ ಯೋಗೀ ಪರಮೋಮತಃ ॥

## ೫. ಅಮೃತಸ್ವರೂಪದ ಅಪರೋಕ್ಷ ಅನುಭವ

ಈ ರೀತಿಯಾಗಿ ಬೀಜವೃಕ್ಷನ್ಯಾಯದಿಂದ ಅನಾದಿಯಾಗಿ ಅವ್ಯಯವಾಗಿ ಅಕ್ಷರವಾಗಿರುವ ಅಜ್ಞಾನಸಂಮೋಹಗಳನ್ನು ಬೇರ್ಪಡಿಸಿ ಶತ್ರುವಿನ ಸಾಮರ್ಥ್ಯದ ಒಳಗುಟ್ಟನ್ನು ತಿಳಿದು, ಪ್ರಮುಖಸ್ಥಾನದಲ್ಲಿ ಶತ್ರುವಿನಂತೆ ವರ್ತಿಸುತ್ತಿರುವ 'ಮೋಹ-ಸಂಮೋಹ ರೂಪದ ಶತ್ರುಗಳನ್ನೂ,' ಅನಂತರ ಹಿಂಬದಿಯಲ್ಲಿ ಅವ್ಯಕ್ತವಾಗಿ ನಿಂತು ಶತ್ರುತ್ವವನ್ನು ಸಾಧಿಸುತ್ತಿರುವ 'ಆನನ್ಯತ್ವ ಏಕತ್ವ ಅದರ್ಶನ ರೂಪದ ಅಜ್ಞಾನವನ್ನೂ' ಜೀವಭೂತನು, ಶತ್ರುಗಳುದುರತ್ಯಯರಾದ ದುರಾಸದ ಶತ್ರುಗಳಾಗಿರುವುದರಿಂದ ಅನಂತವೀರ್ಯನಾದ ಅನಂತವಿಕ್ರಮನಾದ, ಸಂವಾದ ರೂಪದಿಂದ ಸಂದೇಹ ಸಂಶಯಗಳನ್ನು ಹೋಗಲಾಡಿಸಿ ಶತ್ರುನಾಶನ ವಿನಾಶನ ಕಾರ್ಯದಲ್ಲಿ ಸಾರಥಿಯಾಗಿ ಸಹಾಯಕನಾಗಿ ನಿಲ್ಲಲು ಸಿದ್ಧವಾಗಿರುವ, ಸಾಕ್ಷಾತ್ಪರಬ್ರಹ್ಮನಾದ ಪರಂಜ್ಯೋತಿಯಾದ 'ಜಗದ್ಗುರು

ವನ್ನು ಶರಣುಹೊಂದಿ ಅಜ್ಞಾನ ಸಂಮೋಹಗಳನ್ನು ಭಸ್ಮಮಾಡುವ ಜ್ಞಾನ-ವಿಜ್ಞಾನಗಳನ್ನು ಪಡೆದು ಜಯಿಸಬೇಕು.' ಶೋಕಮೋಹ ಭಯಗಳಿಂದ ವ್ಯಥೆಯನ್ನುಂಟುಮಾಡುತ್ತಿದ್ದ ಅಜ್ಞಾನ ಸಂಮೋಹರೂಪದ ಶತ್ರುಗಳು ಪರಂಜ್ಯೋತಿಯಾದ ಜಗದ್ಗುರುವಿನ ಪ್ರವೇಶದಿಂದ ಪುನರಾವರ್ತಿ ಇಲ್ಲದಂತೆ ಭಸ್ಮವಾಗಲು, ನಿತ್ಯಜಾತನು ನಿತ್ಯಮೃತನು ಸಂಸಾರಿ ಎಂದು ಧಾವಂತಪಡುತ್ತಿದ್ದ ವಿಭಕ್ತನಾದ ಜೀವಭೂತನು ತತ್ವತಃ ಜ್ಞೇಯನಾದ 'ಅಮೃತಸ್ವರೂಪ'ನಾದ ಅವಿಭಕ್ತನಾದ 'ಪರಬ್ರಹ್ಮ'ನಾಗಿರುವುದನ್ನು ಅಪರೋಕ್ಷವಾಗಿ ತಿಳಿದು,

> ಬ್ರಹ್ಮಣೋಹಿ ಪ್ರತಿಷ್ಠಾಹಂ ಅಮೃತಸ್ಯಾವ್ಯಯಸ್ಯ ಚ । (ಸತ್)
> ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ (ಸ್ವರೂಪ ಸುಖ)
> ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮರ್ಜುನ । (ತತ್ವದರ್ಶನ)

ಎಂದು ಹೇಳಿರುವಂತೆ ಸುಖಸ್ವರೂಪದಿಂದ ಸರ್ವಗತನಾಗಿ ಸರ್ವಾತೀತನಾಗಿ ಪರಂಜ್ಯೋತಿಯಂತೆ ಪ್ರಕಾಶಿಸುತ್ತಾನೆ. ಈ ಸ್ಥಿತಿಗೆ ತುರೀಯಾತೀತ ಸ್ಥಿತಿ, ಪರಾಶಾಂತಿ ಸ್ಥಿತಿ, ಮೋಕ್ಷ ಆನಂದ ಸ್ಥಿತಿ ಎಂದು ಹೆಸರು. ಇದೇ ಜ್ಞೇಯನಾದ ಪರಬ್ರಹ್ಮನಾದ ಗೀತಾಚಾರ್ಯನು ಶೋಕಸಂವಿಗ್ನಮಾನಸನಾದ ಅರ್ಜುನನಿಗೆ ಮಾಡಿರುವ ಗುಹ್ಯಾದ್ಗುಹ್ಯತಮವಾದ ಪರಬ್ರಹ್ಮೋಪದೇಶ. ವಿಭಕ್ತನಾದ ಜೀವನು ಅವಿಭಕ್ತನಾದ ಪರಬ್ರಹ್ಮನಾಗಲು, ಪರಬ್ರಹ್ಮನು ಹೇಳಿರುವ 'ಪರಮ ಸಾಧನ'. ಈ ಸಾಧನದ ಅನುಷ್ಠಾನದಿಂದ ಅನೇಕರು ಜನ್ಮಬಂಧ ವಿನಿರ್ಮುಕ್ತರಾಗಿ ಅನಾಮಯ ಪದವನ್ನು ಹೊಂದಿ ಪ್ರಸಿದ್ಧ ಪುರುಷರ್ಷಭರಾಗಿದ್ದಾರೆ.

ಜನ್ಮಬಂಧವಿನಿರ್ಮುಕ್ತಾಃ='ವಿ' ಉಪಸರ್ಗ ಮಿಥ್ಯಾತ್ವವನ್ನು ಸೂಚಿಸುತ್ತದೆ. 'ನಿರ್' ಉಪಸರ್ಗ ಪುನರಾವರ್ತಿ ಇಲ್ಲದಂತೆ ಭಸ್ಮವಾಗಿರುವ ಸ್ಥಿತಿಯನ್ನು ಸೂಚಿಸುತ್ತದೆ. ಇದೇ ಆತ್ಮವಿಶುದ್ಧಿಯ ಹೆಗ್ಗುರ್ತು.

ಅನಾಮಯ ಪದ=ಆತ್ಮನ ಅಜ್ಞಾನ ಆವರಣವನ್ನು ಭಸ್ಮಮಾಡಿಕೊಂಡು ಇತರರ ಅಜ್ಞಾನ ಆವರಣವನ್ನು ಭಸ್ಮ ಮಾಡಲು ಸಾಮರ್ಥ್ಯ ಇರುವ ಜ್ಯೋತಿಸ್ವರೂಪ. ಜ್ಞಾನದೀಪ.

# ಸಪ್ತಮ ಪ್ರಕರಣ

## ಗೀತಾಚಾರ್ಯನ ಪರಬ್ರಹ್ಮೋಪದೇಶದ ಉಪಸಂಹಾರ ಮತ್ತು ಅರ್ಜುನನ ವಿಮರ್ಶಾಪೂರ್ವಕದ ನಿಶ್ಚಯ

**ಗೀತಾಚಾರ್ಯ** (ಸರ್ವಧರ್ಮ=ಪ್ರಕೃತಿಧರ್ಮ)—

ಸರ್ವಧರ್ಮಾನ್ ಪರಿತ್ಯಜ್ಯ, ಮಾಮೇಕಂ ಶರಣಂ ವ್ರಜ (ಸರ್ವ=ಪ್ರಕೃತಿ)
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥
ಇತಿಗುಹ್ಯತಮಂ ಶಾಸ್ತ್ರಂ ಇದಮುಕ್ತಂ ಮಯಾನಘ
ಏತತ್ ಬುದ್ಧ್ವಾ 'ಬುದ್ಧಿಮಾನ್' ಸ್ಯಾತ್ ಕೃತಕೃತ್ಯಶ್ಚ ಭಾರತ ॥ (ವಿಮರ್ಶ)

೧. ಸರ್ವಧರ್ಮಾನ್ ಪರಿತ್ಯಜ್ಯ = ಕರ್ಮಯೋಗ ಕರ್ಮಸನ್ಯಾಸ ಯೋಗನಿಷ್ಠೆಗಳಿಂದ ಜ್ಞಾನಾಗ್ನಿಯನ್ನು ಪಡೆದು ಪ್ರಿಯ ಅಪ್ರಿಯ ವಿಷಯಗಳಿಂದ ಮೋಹ ಸಂಮೋಹಗಳನ್ನುಂಟುಮಾಡುತ್ತಿದ್ದ "ಲೋಕಗಳನ್ನು ಪರಿಗ್ರಹಿಸದೆ ಪರಿತ್ಯಜಿಸಿ" ಲೋಕಗಳಃ ಬಂಧನವನ್ನು ಉಂಟುಮಾಡಲು ಅರ್ಹತೆಯಿಲ್ಲದ ಮಿಥ್ಯಾದೃಶ್ಯಗಳಾಗಿರುವುದನ್ನು ತತ್ವತಃ ತಿಳಿದು ಮೋಹ ಸಂಮೋಹವನ್ನು ಭಸ್ಮಮಾಡು. ಪ್ರಕೃತಿಯು ದುರತ್ಯಯವಾದ ಶತ್ರು. ಆಶ್ರಯಿಸಬೇಡ. ಪರಿತ್ಯಾಗಮಾಡು. ಪರಿತ್ಯಜ್ಯ=ಕರ್ಮನಿಷ್ಠೆ.

ಮಾಮೇಕಂ ಶರಣಂ ವ್ರಜ = ಅನನ್ಯ ಅದರ್ಶನರೂಪದ ಅಜ್ಞಾನವನ್ನೂ ಏಕತ್ವ ಅದರ್ಶನರೂಪದ ಅಜ್ಞಾನವನ್ನೂ ಭಸ್ಮಮಾಡಲು, ಅಜ್ಞಾನರೂಪದ ಶತ್ರುವು ದುರಾಸದ ಶತ್ರುವಾಗಿರುವುದರಿಂದ "ಸದಸಚ್ಚ ಜಗತ್ತಿಗೆ (ಅಂದರೆ ಅಜ್ಞಾನಕ್ಕೆ ಮತ್ತು ಅಜ್ಞಾನ ಕಾರ್ಯಕ್ಕೆ) ಮೃತ್ಯು" ವಾಗಿರುವ ಜಗದ್ಗುರುವಾದ ಸಾಕ್ಷಾತ್ಪರಬ್ರಹ್ಮನಾದ ಪ್ರಕೃತಿಸ್ಥನಲ್ಲದ ಅಸಂಸಾರಿಯಾದ ಪರಂಜ್ಯೋತಿಯಾದ ನನ್ನನ್ನು 'ಅನನ್ಯಭಕ್ತಿ' ಯಿಂದಲೂ, 'ಏಕಭಕ್ತಿ'ಯಿಂದಲೂ ಸಂವಾದಪೂರ್ವಕವಾಗಿ ವಿಚಾರ ವಿಮರ್ಶಾಪೂರ್ವಕವಾಗಿ ಸೇವೆಯನ್ನು ಮಾಡುತ್ತಾ, ಶತ್ರುವನ್ನು ಜಯಿಸಿ ಸುಖವನ್ನು ಪಡೆಯಲು ಜಗದ್ಗುರುವಾದ ನನ್ನ ಸಾರಥ್ಯದ ಸಹಾಯವನ್ನು ಪಡೆ. ಅಸಂಸಾರಿಯಾದ ನನ್ನಲ್ಲಿ ಸಂಸಾರಿಯಾದ ನೀನು ಮನಬುದ್ಧಿಗಳನ್ನು ಅರ್ಪಣೆಮಾಡುವುದರಿಂದ ಶತ್ರುನಾಶವೂ ಅಮೃತಸುಖವೂ ಲಭಿಸುತ್ತವೆ. ಮಾಮೇಕಂ=ಅಸಂಸಾರಿ=ಅತೀತ ಪುರುಷ. ಶರಣಂ ವ್ರಜ=ಜ್ಞಾನನಿಷ್ಠೆ.

ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ=ಈ ರೀತಿಯ ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ ಅವಿಭಕ್ತನಾದ ನಿನ್ನನ್ನು ಆವರಣಮಾಡಿ ವಿಭಕ್ತನನ್ನಾಗಿ ಮಾಡಿರುವ ಸರ್ವ ಬಂಧನಗಳಿಗೂ ಕಾರಣವಾಗಿರುವ ಅಜ್ಞಾನ ಸಂಮೋಹಗಳು ಭಸ್ಮವಾಗಿ ಪುನರಾವರ್ತಿ ಇಲ್ಲದೆ ವಿನಾಶವಾಗುವುದರಿಂದ ಶಾಶ್ವತವಾದ ಬಂಧನ ನಿವೃತ್ತಿಯು ಪ್ರಾಪ್ತವಾಗುತ್ತದೆ. ಸಂಶಯಪಡಬೇಡ. (ಸರ್ವಪಾಪ=ಪ್ರಕೃತಿ ಬಂಧನ)

ಮಾಶುಚಃ = ಅಜ್ಞಾನಸಂಮೋಹಗಳು ವಿನಾಶವಾಗುವುದರಿಂದ ಶೋಕ-ಮೋಹ-ಭಯಗಳು ವಿನಾಶವಾಗುತ್ತದೆ. ಈ ಗುಹ್ಯತಮ ಶಾಸ್ತ್ರವನ್ನು ತಿಳಿದು ವಿಚಾರ ವಿಮರ್ಶೆಗಳನ್ನು ಮಾಡು. ಕೃತಕೃತ್ಯನಾಗು. ಅಪರೋಕ್ಷವಾಗಿ ಅಮೃತಸುಖವನ್ನು ಪಡೆ; ಅವಿಭಕ್ತನಾಗಿ ಶಾಶ್ವತವಾದ ಪರಾಶಾಂತಿ ಸ್ಥಾನವನ್ನು ಹೊಂದು.

**ಗೀತಾಚಾರ್ಯ—**

ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ
ಕಚ್ಚಿದಜ್ಞಾನ ಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥

**ಅರ್ಜುನ—**

ನಷ್ಟೋ ಮೋಹಸ್ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ
ಸ್ಥಿತೋಸ್ಮಿ ಗತಸಂದೇಹಃ ಕರಿಷ್ಯೇವಚನಂ ತವ ॥

ಏಕಾಗ್ರಚಿತ್ತದಿಂದ ನನ್ನ ಸಂವಾದವನ್ನು ಶ್ರವಣಮಾಡಿದ್ದರಿಂದ ನಿನ್ನ ಮನದಲ್ಲಿ ಯಾವ ರೀತಿಯಲ್ಲಿ ಆ ವಾಕ್ಯಗಳು ಕಾರ್ಯಕಾರಿಯಾಗಿವೆ? ಅಜ್ಞಾನಸಂಮೋಹಗಳು ನಷ್ಟವಾಯಿತೇ ? ಎಂದು ಕೇಳಿದ ಗೀತಾಚಾರ್ಯನ ಪ್ರಶ್ನೆಗಳಿಗೆ ಉತ್ತರವಾಗಿ ಅರ್ಜುನನು 'ನನ್ನ ಮನದಲ್ಲಿನ ಮೋಹಸಂದೇಹಗಳು ನಾಶವಾಗಿ ಅವುಗಳು ಅಪಹರಣಮಾಡಿದ್ದ ಜ್ಞಾನಸ್ಮೃತಿಗಳು ಲಾಭವಾಯಿತು. ನೀನು ಉಪದೇಶಿಸಿರುವಂತೆ (ಕರಿಷ್ಯೇ ವಚನಂತವ) ಕರ್ಮಯೋಗ, ಕರ್ಮಸನ್ಯಾಸಯೋಗ–ಅನನ್ಯ ಭಕ್ತಿಯೋಗ, ಏಕಭಕ್ತಿಯೋಗ ಅನುಷ್ಠಾನಗಳನ್ನು ಮಾಡಿ ಜ್ಞಾನ ವಿಜ್ಞಾನಅಗ್ನಿಗಳನ್ನು ಪಡೆದು ಅಜ್ಞಾನ ಸಂಮೋಹಗಳನ್ನು ಪುನರಾವರ್ತಿ ಇಲ್ಲದೆ ನಾಶಮಾಡಿ ಕೃತಾರ್ಥನಾಗುತ್ತೇನೆ' ಎಂದು ಹೇಳಿ ಸ್ವಧರ್ಮ ನಿಷ್ಠೆಯನ್ನು ಮುಂದುವರಿಸಿರುತ್ತಾನೆ.

**ಸಂಜಯ—**

ಯತ್ರಯೋಗೇಶ್ವರಃ ಕೃಷ್ಣೋ ಯತ್ರಪಾರ್ಥೋ ಧನುರ್ಧರಃ
ತತ್ರಶ್ರೀ ರ್ವಿಜಯೋ ಭೂತಿಃ ಧ್ರುವಾನೀತಿರ್ಮತಿರ್ಮಮ ॥

ಎಲ್ಲಿ ಜಗದ್ಗುರುವಾದ ಪರಬ್ರಹ್ಮನು ಅಜ್ಞಾನ ಸಂಮೋಹಗಳನ್ನು ನಾಶಮಾಡಲು ಸಾರಥ್ಯವನ್ನು ವಹಿಸಿ ಸಹಾಯಕನಾಗಿರುತ್ತಾನೊ, ಎಲ್ಲಿ ಭಕ್ತನಾದವನು ದ್ವಿವಿಧಾನಿಷ್ಠಾ ಪರನಾಗಿರುತ್ತಾನೋ ಅಲ್ಲಿ, ಭಕ್ತನು ಶತೃಗಳನ್ನು ವಿನಾಶಮಾಡಿ ಅವಿಭಕ್ತನಾದ ಪರಬ್ರಹ್ಮನಾಗಿ ಪರಂಜ್ಯೋತಿಯಂತೆ ಪ್ರಕಾಶಿಸುತ್ತಾ ಶಾಶ್ವತವಾದ ಅಮೃತಸುಖವನ್ನು ಅಪರೋಕ್ಷವಾಗಿ ಅನುಭವಿಸುತ್ತಾನೆ.

## ೨. ಗೀತಾಚಾರ್ಯನ ಪರಬ್ರಹ್ಮೋಪದೇಶವನ್ನೇ ಗಾಯತ್ರಿ ಮಂತ್ರಾರ್ಥವೂ ಉಪದೇಶಿಸುತ್ತದೆ

**ಗಾಯತ್ರಿಮಂತ್ರ—ಜೀವಬ್ರಹ್ಮಸಮರ್ಪಣ ಮಂತ್ರ—**

ಓಂಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ
ದೇವಸ್ಯ । ಧೀಮಹಿ । ಧಿಯೋಯೋನಃ ಪ್ರಚೋದಯಾತ್.

ಓಂಭೂರ್ಭುವಸ್ಸುವಃ = ಲೋಕತ್ರಯವನ್ನು ವ್ಯಾಪಿಸಿರುವವನು "ಓಂ" ಎಂಬ ಏಕ ಅಕ್ಷರ ಬ್ರಹ್ಮನು. ಅಸಂಸಾರಿಯಾದ ತಟಸ್ಥಲಕ್ಷಣದ ಮಹಾಕಾಶವತ್ ಅವಿಭಕ್ತನಾದ ಪರಬ್ರಹ್ಮನು — ಸಗುಣಬ್ರಹ್ಮನಂತೆ ವೇಷಧಾರಿ. (ಗಾಯತ್ರಿ = ಪರಬ್ರಹ್ಮ ಸ್ವರೂಪಿಣಿ)

ಧೀಯೋಯೋನಃ ಪ್ರಚೋದಯಾತ್ = ಬುದ್ಧಿ ಮನಗಳನ್ನು ನಾನು ನನ್ನದು ಎಂದು ತಿಳಿದು ಕರ್ಮಚೋದನೆ ಮಾಡುವ ಅಹಂಕಾರ ವಿಮೂಢಾತ್ಮನು. ಘಟಾಕಾಶವತ್ ವಿಭಕ್ತನಾದ ಜೀವಭೂತನು ಸಂಸಾರಿ. ಈ ವಿಭಕ್ತನಾದ ಜೀವಭೂತನಾದ ನಾನು, ನನ್ನನ್ನು (ಅಹಂಕಾರ ಆತ್ಮ)

ತತ್ = ಲೋಕತ್ರಯ ವೇಷಧಾರಿಯಾದ ತಟಸ್ಥಲಕ್ಷಣದ ಅಸಂಸಾರಿಯಾದ ಅವಿಭಕ್ತ "ಸಗುಣಬ್ರಹ್ಮನೆಂದೂ" ....(1)

ಮತ್ತು (i) ಸವಿತುಃ = ಸೂರ್ಯನಂತೆ ಸ್ಪಷ್ಟವಾಗಿ ಪ್ರಕಾಶಿಸುವ ಪರಂಜ್ಯೋತಿಯಾದ ಅಭಾವವಿಲ್ಲದ ಸತ್ (ಬ್ರಹ್ಮ ಆತ್ಮ).

(ii) ವರೇಣ್ಯಂ = ಶ್ರೇಷ್ಠವಾದ ಸರ್ವರೂ ಪಡೆಯಲು ಇಚ್ಛಿಸುವ ಅಮೃತ ಸುಖ—ಆನಂದ (ವಿಷ್ಣುರಾತ್ಮ).

(iii) ಭರ್ಗ = ಅಜ್ಞಾನ ಸಂಮೋಹಗಳನ್ನು ಭಸ್ಮಮಾಡುವ ಸಾಮರ್ಥ್ಯದಿಂದ ಕೂಡಿದ ಚಿತ್ (ರುದ್ರ ಆತ್ಮ).

ಈ ರೀತಿಯಾಗಿ ಬ್ರಹ್ಮ+ವಿಷ್ಣು+ರುದ್ರ ರೂಪವನ್ನು ಸತ್+ಆನಂದ+ಚಿತ್ ಎಂಬ ತ್ರಿವಿಧ ಸ್ವರೂಪ ಲಕ್ಷಣಗಳಿಂದ ಕೂಡಿದ

ದೇವಸ್ಯ = ಅಸಂಸಾರಿಯಾದ ಅವಿಭಕ್ತನಾದ "ಪರಬ್ರಹ್ಮನೆಂದೂ — ನಿರ್ಗುಣಬ್ರಹ್ಮನೆಂದೂ" .........(2)

ಧೀಮಹಿ = ವಿಚಾರ ವಿಮರ್ಶೆಗಳಿಂದ ಏಕತ್ವಮಾಸ್ಥಿತನಾಗಿ ಅನುಚಿಂತನೆಯನ್ನು ಮಾಡುತ್ತೇನೆ. (ಪ್ರಪಶ್ಯಂತಿ. ಬ್ರಹ್ಮಾರ್ಪಣ) ಈ ರೀತಿಯ ಅನುಚಿಂತನೆಗೆ ಫಲ ಅಜ್ಞಾನ ಸಂಮೋಹಗಳ ಆತ್ಯಂತಿಕ ನಾಶ ಮತ್ತು ಅಪರೋಕ್ಷ ಅಮೃತಸುಖ ಅನುಭವಪ್ರಾಪ್ತಿ.

## ಪರಬ್ರಹ್ಮನ ಪರಿಚಿಂತನ

(ಕೆ. ಕನ್ನಯ್ಯಶಾಸ್ತ್ರಿ)



ಅಪರೋಕ್ಷದರ್ಶನ

ಅಹಂ ಬ್ರಹ್ಮ ಅಹಂ ವಿಷ್ಣುಃ ಅಹಮೇವ ಮಹೇಶ್ವರಃ । (ಸಗುಣಬ್ರಹ್ಮ)
ಅಹಂ ಸಾಕ್ಷಾತ್ಪರಬ್ರಹ್ಮ ನೇಹನಾನಾಸ್ತಿ ಕಿಂಚನ ॥ (ನಿರ್ಗುಣಬ್ರಹ್ಮ)

ಬ್ರಹ್ಮಣೋಹಿ ಪ್ರತಿಷ್ಠಾಹಂ ಅಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚ ಅಹಮಸ್ಮಿ

**೩. ಗೀತಾಚಾರ್ಯನ ಪರಬ್ರಹ್ಮೋಪದೇಶವನ್ನೇ ಸಾಮವೇದದಲ್ಲಿನ ತತ್ + ತ್ವಂ + ಅಸಿ ಮಹಾವಾಕ್ಯವೂ ಬೋಧಿಸುತ್ತದೆ**

ಉದ್ದಾಲಕನು ಶ್ವೇತಕೇತುವಿಗೆ ಮಾಡಿರುವ ಉಪದೇಶ ತತ್ + ತ್ವಂ + ಅಸಿ (ಅವಿನಾಶಿತು ತತ್ ವಿದ್ಧಿ ಯೇನ ಸರ್ವಮಿದಂ ತತಂ)

ತತ್ = ತಟಸ್ಥಲಕ್ಷಣದ ಅಸಂಸಾರಿಯಾದ ಮಹಾಕಾಶವತ್ ನಿರ್ಲಿಪ್ತನಾದ ಅವಿಭಕ್ತನಾದ ವೇಷಧಾರಿಯಾದ ಸಗುಣಬ್ರಹ್ಮನೇ ಪರಬ್ರಹ್ಮನು. ಆ ಪರಬ್ರಹ್ಮನೇ ಅಂದರೆ ಅಮೃತಸ್ವರೂಪನೇ

ತ್ವಂ = ಸಂಸಾರಿಯಾದ ಘಟಾಕಾಶವತ್ ವಿಭಕ್ತನಾದ ಜೀವಭೂತನಾದ ನೀನು.

ಅಸಿ = ಆಗಿದ್ದಿ = (ಅವಿಭಕ್ತನಾಗಿದ್ದಿ. ಇದನ್ನು ನೀನು ತಿಳಿದಿಲ್ಲ; ತಿಳಿಯಬೇಕು.) ತ್ವಂ–ತತ್ ಸಮರ್ಪಣ.

ಶ್ವೇತಕೇತುವು ಉದ್ದಾಲಕನ ಉಪದೇಶವನ್ನು ಗ್ರಹಿಸಿ ವಿಚಾರ ವಿಮರ್ಶೆಗಳಿಂದ ನಿಶ್ಚಯಿಸಿ ಅಹಂ+ಬ್ರಹ್ಮ+ಅಸ್ಮಿ ಎಂದು ಉತ್ತರವನ್ನು ಹೇಳಿದ್ದಾನೆ.

ಅಹಂ = ಸಂಸಾರಿಯಂತೆ ಘಟಾಕಾಶವತ್ ವಿಭಕ್ತನಂತೆ ಜೀವಭೂತನಂತೆ ತಿಳಿದಿದ್ದ ನಾನು

ಬ್ರಹ್ಮ = ತಟಸ್ಥ ಲಕ್ಷಣದ ಅಸಂಸಾರಿಯಾದ ಮಹಾಕಾಶವತ್ ನಿರ್ಲಿಪ್ತನಾದ ಅವಿಭಕ್ತನಾದ ಸಗುಣಬ್ರಹ್ಮನೇ ಅಂದರೆ ಆನಂದ ಸ್ವರೂಪ ಲಕ್ಷಣದ ಪರಬ್ರಹ್ಮನೇ

ಅಸ್ಮಿ = ಆಗಿರುತ್ತೇನೆ ಎಂದು ಹೇಳಿರುತ್ತಾನೆ. ಅಹಂ-ಬ್ರಹ್ಮಸಮರ್ಪಣ.

**೪. ಉಪನಿಷತ್ ಸಾರ– ಜ್ಞೇಯಬ್ರಹ್ಮ**

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ
ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥

ಓಂ = ಜಾಗ್ರತ್ ಸ್ವಪ್ನ ಸುಷುಪ್ತಿಗಳ ವೇಷಧಾರಿ ಅವಿಭಕ್ತನಾದ ಅಸಂಸಾರಿ ಸಗುಣಬ್ರಹ್ಮನು.

ಪೂರ್ಣಮದಃ = ವೇಷಧಾರಣೆಗೆ ಪೂರ್ವದಲ್ಲಿನ ಅವಿಭಕ್ತನ
ಅಸಂಸಾರಿ ಪರಬ್ರಹ್ಮನು. ದೇಶಕಾಲವಸ್ತು ಪರಿಚ್ಛೇದವಿಲ್ಲದ ಅಂದ
ಅಭಾವವಿಲ್ಲದ ಪೂರ್ಣನು. (ಉದಾಹರಣೆಯಲ್ಲಿನ ಮಹಾಕಾಶಕ್ಕೆ ಅ
ಭಕ್ತತ್ವ ಹೇಳಿದೆ. ಅಭಾವವಿಲ್ಲದ ಪೂರ್ಣತ್ವ ಹೇಳಿರುವುದಿಲ್ಲ.)

ಪೂರ್ಣಮಿದಂ = ಪೂರ್ವಸ್ಥಿತಿಯಿಂದ ವಿಯೋಗವನ್ನು ಹೊಂ
ಸಂಸಾರಿಯಂತೆ ವಿಭಕ್ತನಂತೆ ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಕಾಣಬರು
ತ್ತಿರುವ ಕಾಲದಲ್ಲೂ ಅವಿಭಕ್ತನು ಪೂರ್ಣನು ಅಸಂಸಾರಿ. ಪೂರ್ಣಾತ
ಪೂರ್ಣಃ = ಪೂರ್ಣನಾದ ನಿರ್ಗುಣಬ್ರಹ್ಮನೇ ಪೂರ್ಣನಾದ ಸಗುಣ
ಬ್ರಹ್ಮನು.

ಪೂರ್ಣಸ್ಯಪೂರ್ಣಮಾದಾಯ = ಜಾಗ್ರತ್ ಸ್ವಪ್ನ ಸುಷುಪ್ತಿ ವೇಷ
ಧಾರಿಯಾದ ಪೂರ್ಣನಾದ ಸಗುಣಬ್ರಹ್ಮನು, ಜಾಗ್ರತ್ ಸ್ವಪ್ನ ಸುಷುಪ್ತಿ
ವೇಷವನ್ನು ವಿಸರ್ಜನೆಮಾಡಿ, ವೇಷಧಾರಣೆಗೆ ಪೂರ್ವದಲ್ಲಿದ್ದಂತೆ ಪೂರ್ಣ
ನಾದ ಪರಬ್ರಹ್ಮನ ಸಂಯೋಗವನ್ನು ಹೊಂದಲು (ಪರಬ್ರಹ್ಮನಾಗಲು),

ಪೂರ್ಣಮೇವಾವಶಿಷ್ಯತೆ = ಪೂರ್ಣನಾದ ಅಸಂಸಾರಿಯಾದ ಪ
ಬ್ರಹ್ಮನೊಬ್ಬನೇ (ನಿರ್ಗುಣಬ್ರಹ್ಮ) ಶೇಷಿಯಾಗಿ ಉಳಿದಿರುತ್ತಾನೆ.
ಜಾಗ್ರತ್ ಸ್ವಪ್ನ ಸುಷುಪ್ತಿಗಳು ಅಜ್ಞಾನಜವಾದ ವಿಮೂಢಭಾವದ ದೃಶ್ಯ
ಗಳಾಗಿರುವುದರಿಂದ, ವೇಷಧಾರಣೆಯ ಕಾಲದಲ್ಲಿ ಅವುಗಳಿಗೆ ಮಿಥ್ಯಾದೃಶ್ಯ
ದಂತೆಯೂ ಐಶ್ವರಯೋಗದಂತೆಯೂ ದೃಶ್ಯದ ಸ್ಥಿತಿ ಇದ್ದಿತೇ ವಿನಃ ವೇಷ
ವಿಸರ್ಜನಾನಂತರ ಅವುಗಳು ಶೇಷವಾಗಿ ನಿಲ್ಲದೆ ಪುನರಾವರ್ತಿ ಇಲ್ಲದಂತೆ
ಭಸ್ಮವಾಗುತ್ತವೆ.

ಆದ್ದರಿಂದ ವಿಭಕ್ತನಾದ ಜೀವನನ್ನು, ಅವಿಭಕ್ತನಾದ ಪರಬ್ರಹ್ಮ
ನನ್ನಾಗಿ ಅಮೃತಸುಖ ಸ್ವರೂಪನನ್ನಾಗಿ ಮಾಡುವುದೇ ಎಲ್ಲಾ ಉಪದೇಶ
ಗಳ ತಾತ್ಪರ್ಯ. ಪರಬ್ರಹ್ಮನ ವಿಮರ್ಶಾಪೂರ್ವಕವಾದ ಪರಿಚಿಂತ
ನೆಯೇ, ಜೀವನು ಪರಬ್ರಹ್ಮನಾಗಲು ಅಮೃತಸುಖ ಸ್ವರೂಪನಾಗಲು
ಉಪದೇಶಿಸಲ್ಪಟ್ಟಿರುವ ಸಾಧನ.

**ಹರಿಃ ಓಂ ತತ್ಸತ್ ಬ್ರಹ್ಮಾರ್ಪಣಮಸ್ತು—ವಾಸುದೇವಾರ್ಪಣಮಸ್ತು**
**ಗೀತಾಚಾರ್ಯನ ಪರಬ್ರಹ್ಮೋಪದೇಶ ಮತ್ತು**
**ಅರ್ಜುನನ ವಿಮರ್ಶೆ ಸಂಪೂರ್ಣ**

821—51. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.